# ನಾಯಕನಹಟ್ಟಿ ಪರಿಸರದ ಮೌಖಿಕ ಸಾಹಿತ್ಯದಲ್ಲಿ ವೃತ್ತಿ-ಅರೆವೃತ್ತಿಗಾಯಕರು : ಸಾಂಸ್ಕೃತಿಕ ಅಧ್ಯಯನ

(ಎಂ.ಫಿಲ್.ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ ಕನ್ನಡ ಸಾಹಿತ್ಯ ಅಧ್ಯಯನ ವಿಭಾಗಕ್ಕೆ ಸಲ್ಲಿಸುತ್ತಿರುವ ಸಂಪ್ರಬಂಧ)


ಸಂಶೋಧಕರು

ಅಜ್ಜಯ್ಯ ಜಿ.

ಮಾರ್ಗದರ್ಶಕರು

ಡಾ. ಮಲ್ಲಿಕಾರ್ಜುನಗೌಡ

ಸಹಾಯಕ ಪ್ರಾಧ್ಯಾಪಕರು







ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ

ಭಾಷಾ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೧೩

1027

# ನಾಯಕನಹಟ್ಟಿ ಪರಿಸರದ ಮೌಖಿಕ ಸಾಹಿತ್ಯದಲ್ಲಿ ವೃತ್ತಿ-ಅರೆವೃತ್ತಿಗಾಯಕರು : ಸಾಂಸ್ಕೃತಿಕ ಅಧ್ಯಯನ

(ಎಂ.ಫಿಲ್.ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ ಕನ್ನಡ ಸಾಹಿತ್ಯ ಅಧ್ಯಯನ ವಿಭಾಗಕ್ಕೆ ಸಲ್ಲಿಸುತ್ತಿರುವ ಸಂಪ್ರಬಂಧ)


ಸಂಶೋಧಕರು

ಅಜ್ಜಯ್ಯ ಜಿ.

ಮಾರ್ಗದರ್ಶಕರು

ಡಾ. ಮಲ್ಲಿಕಾರ್ಜುನಗೌಡ

ಸಹಾಯಕ ಪ್ರಾಧ್ಯಾಪಕರು





ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ

ಭಾಷಾನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೧೩

## ಘೋಷಣಾ ಪತ್ರ

**"ನಾಯಕನಹಟ್ಟಿ ಪರಿಸರದ ಮೌಖಿಕ ಸಾಹಿತ್ಯದಲ್ಲಿ ವೃತ್ತಿ–ಅರೆವೃತ್ತಿಗಾಯಕರು : ಸಾಂಸ್ಕೃತಿಕ ಅಧ್ಯಯನ"** ಎಂಬ ಸಂಪ್ರಬಂಧವನ್ನು **ಡಾ. ಮಲ್ಲಿಕಾರ್ಜುನಗೌಡ** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸುತ್ತಿದ್ದೇನೆ. ಈ ಸಂಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲ. ಇದರ ಯಾವುದೇ ಭಾಗ ಎಲ್ಲಿಯೂ ಪ್ರಕಟವಾಗಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

ಅಜ್ಜಯ್ಯ ಜಿ.
**ಅಜ್ಜಯ್ಯ ಜಿ.**
ಸಂಶೋಧನಾ ವಿದ್ಯಾರ್ಥಿ
ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
**ಕನ್ನಡ ವಿಶ್ವವಿದ್ಯಾಲಯ, ಹಂಪಿ**

ಸ್ಥಳ : ವಿದ್ಯಾರಣ್ಯ
ದಿನಾಂಕ : 20-2-12

# ಮಾರ್ಗದರ್ಶಕರ ಪ್ರಮಾಣಪತ್ರ

**"ನಾಯಕನಹಟ್ಟಿ ಪರಿಸರದ ಮೌಖಿಕ ಸಾಹಿತ್ಯದಲ್ಲಿ ವೃತ್ತಿ-ಅರೆವೃತ್ತಿಗಾಯಕರು : ಸಾಂಸ್ಕೃತಿಕ ಅಧ್ಯಯನ"** ಎಂಬ ಸಂಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್. ಪದವಿಗಾಗಿ **ಅಜ್ಜಯ್ಯ ಜಿ.** ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ ಪ್ರಸ್ತುತ ಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಇಲ್ಲವೆ ಪ್ರಕಟಣೆಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

**ಡಾ. ಮಲ್ಲಿಕಾರ್ಜುನಗೌಡ**
ಮಾರ್ಗದರ್ಶಕರು
ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
**ಕನ್ನಡ ವಿಶ್ವವಿದ್ಯಾಲಯ, ಹಂಪಿ**

ಸ್ಥಳ : ವಿದ್ಯಾರಣ್ಯ
ದಿನಾಂಕ : 20-2-02

# ಪರಿವಿಡಿ

## ಅಧ್ಯಾಯ – ಒಂದು

# ಅಧ್ಯಯನದ ಉದ್ದೇಶ, ಮಹತ್ವ, ವ್ಯಾಪ್ತಿ ಮತ್ತು ವೈಧಾನಿಕತೆ

'ವೈವಿಧ್ಯತೆಯಲ್ಲಿ ಏಕತೆ'ಯನ್ನು ಕಾಣುವ ನಮ್ಮ ದೇಶವು ಹಲವು ಜನಾಂಗ, ಧರ್ಮ, ಸಂಸ್ಕೃತಿ, ಸಮುದಾಯ ಸಮ್ಮಿಶ್ರಣದ ತವರು. ಇಂತಹ ಸಮ್ಮಿಶ್ರಣ ಸಂಸ್ಕೃತಿಯ ನೆಲೆಗಳಲ್ಲಿ ನಮ್ಮ ರಾಜ್ಯವೂ ಒಂದು. ಹೀಗೆ ಸಾಂಸ್ಕೃತಿಕವಾಗಿ ಶ್ರೀಮಂತವಾಗಿರುವ ನಮ್ಮ ರಾಜ್ಯದಲ್ಲಿ ಹಲವಾರು ಬುಡಕಟ್ಟು ಸಮುದಾಯಗಳಿವೆ. ಆದರೆ ಈ ಸಮುದಾಯಗಳು ಶತಮಾನಗಳವರೆಗೂ ಅಕ್ಷರ ಜ್ಞಾನದಿಂದ ವಂಚಿತವಾಗಿದ್ದು, ಇಂತಹ ಸಮುದಾಯಗಳು ತಮ್ಮ ಆಶಯ ಅಭಿವ್ಯಕ್ತಿಯ ಸಂವಹನ ವಾಹಕವಾಗಿ 'ಮಾತನ್ನು' ಬಳಸುವುದರ ಮುಖೇನ 'ಮಾತೆಂಬುದು ಜ್ಯೋತಿರ್ಲಿಂಗ' ಎಂಬ ಶರಣರ ವಚನದಂತೆ ಮಾತು ಭಾಷೆಯ ಸಂಪರ್ಕಕೊಂಡಿಯಾಗಿ ಸಮುದಾಯಗಳ, ಸಮಾಜದ ಅನಿಸಿಕೆ, ಅಭಿಪ್ರಾಯಗಳನ್ನು ಅಂತರಂಗದ ಸಂವೇದನೆಯ ನೆಲೆಗಟ್ಟನ್ನು ಅಭಿವ್ಯಕ್ತಿಪಡಿಸಲು ಮಾತು ಭಾಷೆಯ ಮಾದ್ಯಮವಾಗಿ ಕೆಲಸ ಮಾಡಿತು.

ಹೀಗೆ ಮಾನವನು ಅಕ್ಷರ ವಂಚಿತ ಕಾಲದಲ್ಲಿ ತನ್ನ ಸಮಾಜ, ಸಮುದಾಯದಿಂದ ಆಶಯ, ಅಭಿವ್ಯಕ್ತಿ, ನೋವು–ನಲಿವು, ಸುಖ–ದುಃಖ ಮುಂತಾದ ಭಾವನಾತ್ಮಕ ಸಂಬಂಧಗಳನ್ನು ಹೊರಗೆಡಹಲು ಬಾಯಿ ಮಾತಿನ ಮೂಲಕ ಅಭಿವ್ಯಕ್ತಿಗೊಳಿಸಿದನು. ಈ ಬಾಯಿ ಮಾತಿನ ಶಾಬ್ದಿಕ ರೂಪದ ಸಾಹಿತ್ಯವನ್ನು ವಿದ್ವಾಂಸರ ವಲಯದಲ್ಲಿ 'ಮೌಖಿಕ ಸಾಹಿತ್ಯ' ಎಂದು ಗುರುತಿಸಲಾಯಿತು. ಹೀಗೆ ಜನಪದರಿಂದ ವಿಕಸಿತವಾದ ಸಾಹಿತ್ಯವೇ ಅಪ್ಪಟ ದೇಸಿ ಸಾಹಿತ್ಯ.

ಜನಪದ ಸಾಹಿತ್ಯದ ಒಂದು ಪ್ರಕಾರವಾದ ಮೌಖಿಕ ಸಾಹಿತ್ಯವು ಜನಪದರ ಅಥವಾ ಅನಕ್ಷರಸ್ಥರ ಸಾಹಿತ್ಯ. ಮೌಖಿಕ ಸಾಹಿತ್ಯ ಜನಪದರಿಂದ ರೂಪಗೊಂಡ ಅಪ್ರಕಟಿತವಾಗಿ ಬಾಯಿ ಮೂಲಕ ಅಭಿವ್ಯಕ್ತಿಗಳ್ಳುವ ಸಾಹಿತ್ಯ. ಈ ಸಾಹಿತ್ಯದಲ್ಲಿ ಕಂಡುಬರುವ ಪ್ರಕಾರಗಳಾದ ಕಥೆ, ಲಾವಣಿ,

ಕಾವ್ಯ, ಖಂಡಕಾವ್ಯ, ಮಹಾಕಾವ್ಯ, ಐತಿಹ್ಯ, ಪುರಾಣ, ಗಾದೆ, ಒಡುಪು, ಕಥನಗೀತೆ, ಮಾಂತ್ರಿಕ ನುಡಿ, ಸ್ವಾಗತ ಮತ್ತು ಬಿಳ್ಕೊಡುಗೆಯ ನುಡಿ, ಅಣುಕು ನುಡಿ, ಶಿಶುಪ್ರಾಸ, ಶಾಪಗಳು, ಮೊದಲಾದ ಎಲ್ಲಾ ಪ್ರಕಾರಗಳನ್ನು ಅಳವಡಿಸಿಕೊಂಡು ಜನಪದರು ತಮ್ಮ ಬಾಯಿ ಮೂಲಕ ವ್ಯಕ್ತಪಡಿಸುತ್ತಿದ್ದರು. ಇವುಗಳಲ್ಲಿ ಗೀತೆ, ಲಾವಣಿ, ಪುರಾಣ, ಐತಿಹ್ಯ, ಗಾದೆ, ಕಾವ್ಯ, ಮಹಾಕಾವ್ಯ, ಕಥನಗೀತೆ ಇವುಗಳೆಲ್ಲವನ್ನೂ ಪ್ರತ್ಯೇಕಿಸಿಕೊಂಡು ಅವುಗಳ ಸಾಹಿತ್ಯಿಕ ಮೌಲ್ಯವನ್ನು ಗುರುತಿಸಲಾಯಿತು. ಹೀಗೆ ಮೌಖಿಕ ಸಾಹಿತ್ಯ ಪ್ರತಿಯೊಂದು ಸಮುದಾಯ, ಸಮಾಜ, ರಾಷ್ಟ್ರಜೀವನದ ಸಮಗ್ರ ಜೀವಂತ ಚಿತ್ರಣ.

ಹೀಗೆ ಮೌಖಿಕ ಸಾಹಿತ್ಯವೇ ತಮ್ಮ ಜೀವಾಳ ಎಂದು ನಂಬಿ ಪರಂಪರಾಗತವಾಗಿ ಜೀವನೋಪಾಯಕ್ಕಾಗಿ ಹಾಡುವುದೇ ತಮ್ಮ ಕುಲವೃತ್ತಿಯೆಂದು ಭಾವಿಸಿ ಉಪಜೀವಿಸುತ್ತಿರುವ ವೃತ್ತಿಗಾಯಕ ಸಮುದಾಯಗಳು ಆಸ್ತಿತ್ವಕ್ಕೆ ಬಂದವು. ಇವರು ತಮ್ಮ ಕಂಠಸ್ಥರೂಪದಲ್ಲಿ ಹಾಡುಗಾರಿಕೆ ಮಾಡುತ್ತ, ಕಥಾಮೇಳ ನಡೆಸುತ್ತ ಜನಪದರ ಪ್ರೀತಿಗೆ ಪಾತ್ರರಾಗಿ ಅವರಿಂದ ದವಸ-ಧಾನ್ಯ, ಉಡುಗೊರೆಗಳನ್ನು ಸ್ವೀಕರಿಸಿ ಜೀವಿಸುತ್ತಿದ್ದರು. ಹಾಗೆಯೇ ಸಮಾಜದಿಂದ ಉತ್ತಮವಾದ ಗೌರವ, ಸ್ಥಾಮನಮಾನಗಳಿಂದ ಉತ್ತೇಜಿತರಾದ ಇವರು ಹಾಡುವುದನ್ನು ವಂಶಪರಂಪರೆವಾಗಿ ರೂಪಿಸಿಕೊಂಡು ಬಂದರು. ಮೌಖಿಕ ಪರಂಪರೆ ಸಂಸ್ಕೃತಿಯ ಪ್ರಚಾರಕರಾಗಿ ಕಾರ್ಯನಿರ್ವಹಿಸಿದರು. ಹೀಗೆ ವೃತ್ತಿಗಾಯಕ ಸಮುದಾಯಗಳು ಇಂದು ಜಗತ್ತಿನ ಎಲ್ಲ ಸಮಾಜ, ಸಮುದಾಯ, ಸಂಸ್ಕೃತಿಗಳಲ್ಲಿ ಕಂಡುಬರುತ್ತಾರೆ. ನಮ್ಮ ದೇಶದಲ್ಲಿ ಪ್ರಾದೇಶಿಕ ಹಿನ್ನೆಲೆಯಲ್ಲಿ ಬೇರೆ ಬೇರೆ ವೃತ್ತಿಗಾಯಕ ಸಮುದಾಯಗಳು ಕಾಣಬರುತ್ತಿವೆ. ನಮ್ಮ ರಾಜ್ಯದಲ್ಲಿ ಧಾರ್ಮಿಕ, ಲೌಕಿಕ, ಅರೆವೃತ್ತಿಗಾಯಕ ವರ್ಗಗಳು ಕಂಡುಬರುತ್ತವೆ. ಅದರಂತೆಯೇ ನಾಯಕನಹಟ್ಟಿ ಪರಿಸರದಲ್ಲಿ ತಮ್ಮದೆ ಆದ ಸಾಮಾಜಿಕ, ಧಾರ್ಮಿಕ, ಸಾಂಸ್ಕೃತಿಕ ಆಚರಣೆಗಳನ್ನು ಆಚರಿಸುತ್ತಾ ಗಾಯನ ಮಾಡುವ ಚೌಡಿಕೆಯರು, ಕಿನ್ನರಜೋಗಿಗಳು, ದೊಂಬಿದಾಸರು, ಸುಡಗಾಡುಸಿದ್ಧರು, ,ಕೋಲಾಟದವರು, ಭಜನೆಯವರು, ಸೊಬಾನೆಯವರು, ಬಯಲಾಟ ಮೇಳದವರು ಮೊದಲಾದ ವೃತ್ತಿ ಅರೆವೃತ್ತಿಗಾಯಕದವರು ಕಂಡುಬರುತ್ತಾರೆ. ಪ್ರಸ್ತುತ ಅಧ್ಯಯನದಲ್ಲಿ **"ನಾಯಕನಹಟ್ಟಿ ಪರಿಸರದ ಮೌಖಿಕ ಸಾಹಿತ್ಯದಲ್ಲಿ ವೃತ್ತಿ-ಅರೆವೃತ್ತಿ ಗಾಯಕರು : ಸಾಂಸ್ಕೃತಿಕ ಅಧ್ಯಯನ."** ಎಂಬ ವಿಷಯಯವನ್ನು ಆಯ್ಕೆ ಮಾಡಿಕೊಂಡು ತನ್ಮೂಲಕ ಆ ಭಾಗದಲ್ಲಿ ಬರುವ ವೃತ್ತಿ-ಅರೆವೃತ್ತಿಗಾಯಕರ ಸಾಮಾಜಿಕ, ಆರ್ಥಿಕ, ಸಾಹಿತ್ಯಿಕ, ಸಾಂಸ್ಕೃತಿಕ ಅವರ ಇತ್ತಿಚಿನ ಬದಲಾವಣೆಗಳನ್ನು ಕ್ಷೇತ್ರಕಾರ್ಯ ಮುಖೇನ ದತ್ತಾಂಶಗಳನ್ನು ಸಂಗ್ರಹಿಸಿ ವಿಶ್ಲೇಷನೆಗೆ ಒಳಪಡಿಸಿ ಈ ಅಧ್ಯಯನವನ್ನು ಮಾಡಲಾಗಿದೆ.

**ಅಧ್ಯಯನದ ಉದ್ದೇಶ, ಮಹತ್ವ :**

ಪ್ರಸ್ತುತ ಅಧ್ಯಯನವು ಸಾಂಸ್ಕೃತಿಕವಾಗಿ ಶ್ರೀಮಂತವಾಗಿರುವ ನಾಯಕನಹಟ್ಟಿ ಪರಿಸರದಲ್ಲಿ ತಮ್ಮ ದೈವ, ಮತ, ಕುಲವೃತ್ತಿಯೆಂದು ಭಾವಿಸಿ ಉಪಜೀವಿಸುವ ಹಾಗೂ ಜೀವನೋಪಾಯಕ್ಕಾಗಿ ಹಾಡುವುದು, ಕಲಾಪ್ರದರ್ಶನ ನಡೆಸುವುದರ ಮೂಲಕ ಜನರ ಆಹ್ವಾನದ ಮೇರೆಗೆ ಹೋಗಿ ಹಾಡುವರು. ವಿಶೇಷ ಕಾರ್ಯಗಳ ಸಂದರ್ಭದಲ್ಲಿ ಕಲಾಮೇಳಗಳನ್ನು ನಡೆಸುತ್ತಾ, ತಮ್ಮ ಶೋತೃವರ್ಗದಿಂದ ದವಸ-ಧಾನ್ಯ, ಉಡುಗೊರೆ ಕಾಣಿಕೆಗಳನ್ನು ಪಡೆದು ಜೀವಿಸುವ ವೃತ್ತಿ-ಅರೆವೃತ್ತಿಗಾಯಕ ಸಮುದಾಯಗಳ ಕುರಿತು ಅಧ್ಯಯನ ಮಾಡಲಾಗಿದೆ. ಇಲ್ಲಿನ ಪ್ರಮುಖ ವೃತ್ತಿಗಾಯಕ ಸಮುದಾಯಗಳಾದ ಚೌಡಿಕೆಯವರು, ಸುಡಗಾಡುಸಿದ್ಧ, ದೊಂಬಿದಾಸ, ಕಿನ್ನರಿಜೋಗಿ ಹಾಗೂ ಬಯಲಾಟದವರು, ಭಜನೆಮೇಳ, ಕೋಲುಮೇಳ, ಸೊಬಾನೆ, ಪುರಾಣ, ಕಥೆ ಹೇಳುವಂಥ ಅರೆವೃತ್ತಿಗಾಯಕರು ಈ ಪರಿಸರದಲ್ಲಿದ್ದು ಅವರ ಧಾರ್ಮಿಕ, ಸಾಮಾಜಿಕ ಸಂಪ್ರದಾಯಗಳು, ನಂಬಿಕೆಗಳು, ಸಂಸ್ಕಾರ ವಿಧಾನಗಳು, ಸಾಂಸ್ಕೃತಿಕ ಲಕ್ಷಣಗಳನ್ನು ಕುರಿತು ಅಧ್ಯಯನ ಮಾಡಲಾಗಿದೆ.

**ಉದ್ದೇಶ :**

* ನಾಯಕನಹಟ್ಟಿ ಪರಿಸರದ ಚಾರಿತ್ರಿಕ ಮತ್ತು ಜನಪದ ಮತ್ತು ಭೌಗೋಳಿಕ ಹಿನ್ನೆಲೆಯನ್ನು ಅಧ್ಯಯನ ಮಾಡಲಾಗಿದೆ.
* ಈ ಪರಿಸರದ ಮೌಖಿಕ ಅಥವಾ ಜನಪದ ಸಾಹಿತ್ಯಿಕ ಪರಂಪರೆಯ ಸಮೃದ್ಧಿಯನ್ನು ಚರ್ಚಿಸಲಾಗಿದೆ.
* ವೃತ್ತಿ-ಅರೆವೃತ್ತಿಗಾಯಕರ ಹಿನ್ನೆಲೆ, ಕುಲಮೂಲ ವೃತ್ತಿ, ದೈವಚಾರಣೆ, ಧಾರ್ಮಿಕ ಸಂಸ್ಕಾರಗಳ ತಿಳಿಸಲಾಗಿದೆ.
* ಈ ಪರಿಸರದ ವೃತ್ತಿ-ಅರೆವೃತ್ತಿಗಾಯಕರ ಸಾಮಾಜಿಕ ಆಚರಣೆಗಳಾದ ಜೀವನಾವರ್ತನ ಆಚರಣೆಗಳ ಕುರಿತು ಅಧ್ಯಯನ ಮಾಡಲಾಗಿದೆ.
* ಪರಿವರ್ತನೆಯ ಸುಳಿಯಲ್ಲಿ ವೃತ್ತಿ-ಅರೆವೃತ್ತಿಗಾಯಕರ ಸ್ಥಿತಿ-ಗತಿಗಳನ್ನು ಚರ್ಚಿಸಲಾಗಿದೆ.
* ವೃತ್ತಿ-ಅರೆವೃತ್ತಿಗಾಯಕರ ಸಾಹಿತ್ಯಿಕ, ಸಾಂಸ್ಕೃತಿಕ, ಆರ್ಥಿಕ ಅಂಶಗಳನ್ನು ಕುರಿತು ಗುರುತಿಸಲಾಗಿದೆ.
* ಅರೆವೃತ್ತಿಗಾಯಕರ ಸಾಂಸ್ಕೃತಿಕ ಲಕ್ಷಣಗಳ ತಾತ್ವಿಕ ವಿಶ್ಲೇಷಣೆಗೆ ಒಳಪಡಿಸಿದೆ.
* ವೃತಿ-ಅರೆವೃತ್ತಿಗಾಯಕರ ಪರ್ಯಾಯ ಮಾರ್ಗಗಳ ಬಗ್ಗೆ ಸಲಹೆ, ಪರಿಹಾರಗಳನ್ನು ಸೂಚಿಸಿದೆ.

**ವ್ಯಾಪ್ತಿ**

ಪ್ರಸ್ತುತ ಅಧ್ಯಯನವು ವೃತ್ತಿ-ಅರೆವೃತ್ತಿಗಾಯಕರ ಸಾಂಸ್ಕೃತಿಕ ಅಧ್ಯಯನಕ್ಕೆ ಸೀಮಿತವಾಗಿದೆ. ಹಾಗೆಯೇ ತಮ್ಮ ಗಾಯನ, ವಾದ್ಯ, ನೃತ್ಯ, ವೇಷಭೂಷಣಗಳು, ಮತ, ದೈವ ಕುಲ ಸಂಬಂಧ ತಾತ್ವಿಕ, ಧಾರ್ಮಿಕ ವಿಚಾರಗಳ ಪ್ರಚಾರಕರಾಗಿ ಜನರ ಮನಸ್ಸನ್ನು ಸೂರೆಗಳ್ಳುವ ಇವರ ವೃತ್ತಿಜೀವನ ಚರಿತ್ರೆ ಸೂಕ್ಷ್ಮಾತೀತವಾದುದು. ಸಾಂಸ್ಕೃತಿಕವಾಗಿ ಶ್ರೀಮಂತವಾಗಿರುವ ನಾಯಕನಹಟ್ಟಿ ಪುಣ್ಯ ಕ್ಷೇತ್ರವು ತನ್ನ ಒಡಲಿನ ಗರ್ಭದಲ್ಲಿ ಆಗಾಧವಾದ ಜನಪದ ಅಥವಾ ಮೌಖಿಕ ಸಾಹಿತ್ಯದ ಕಣಜವನ್ನು ತುಂಬಿಕೊಂಡಿದೆ. ಈ ಪರಿಸರಕ್ಕೆ ಸಂಬಂಧಿಸಿದಂತೆ ಆಯ್ಕೆ ಮಾಡಿಕೊಂಡ ಪ್ರಮುಖ ನೆಲೆಗಳೆಂದರೆ ನಾಯಕನಹಟ್ಟಿ, ಎನ್. ದೇವರಹಳ್ಳಿ, ಜೋಗಿಹಟ್ಟಿ, ನಲಗೇತನಹಟ್ಟಿ, ಬೋಸೆದೇವರಹಟ್ಟಿ, ದೊಣಮಂಡಲಹಟ್ಟಿ, ಗುಂತಕೋಲಮ್ಮನಹಳ್ಳಿ, ಮಲ್ಲೂರಹಳ್ಳಿ, ನೇರ್ಲಗುಂಟೆ, ಕುದಾಪುರ, ಗೌಡಗೆರೆ, ಅಬ್ಬೆನಹಳ್ಳಿ ಮೊದಲಾದವು.

**ಅಧ್ಯಯನದ ವೈಧಾನಿಕತೆ**

ಈ ಅಧ್ಯಯನವನ್ನು ಆರು ಅಧ್ಯಾಯಗಳಾಗಿ ವಿಂಗಡಿಸಲಾಗಿದೆ.

ಅಧ್ಯಾಯ ಒಂದರಲ್ಲಿ ಅಧ್ಯಯನದ ಉದ್ದೇಶ, ಮಹತ್ವ, ವ್ಯಾಪ್ತಿ, ವೈಧಾನಿಕತೆ, ಇದುವರೆಗೆ ನಡೆದಿರುವ ಅಧ್ಯಯನಗಳ ಕುರಿತಾಗಿ ಚರ್ಚಿಸಲಾಗಿದೆ.

ಅಧ್ಯಾಯ ಎರಡರಲ್ಲಿ ನಾಯಕನಹಟ್ಟಿ ಭೌಗೋಳಿಕವಾಗಿ ನಮ್ಮ ರಾಜ್ಯದ ಮದ್ಯ ಭಾಗದಲ್ಲಿ ಬರುವ ಬಯಲುಸೀಮೆ. ಇದು ಚಿತ್ರದುರ್ಗ ಜಿಲ್ಲೆಯಿಂದ ಈಶಾನ್ಯ ದಿಕ್ಕಿಗೆ ಮೂವತ್ತು ಕಿ.ಮೀ. ದೂರ, ಚಳ್ಳಕೆರೆ ತಾಲೂಕಿನಿಂದ ವಾಯುವ್ಯ ದಿಕ್ಕಿಗೆ ಇಪ್ಪತ್ತು ಕೀ.ಮೀ. ದೂರವಿರುವ ಈ ಕ್ಷೇತ್ರವು ರಾಜ್ಯದಲ್ಲೇ ಅತೀ ಕಡಿಮೆ ಮಳೆ ಬೀಳುವ ಪ್ರದೇಶ. ರಾಜ್ಯದ ಹಿಂದುಳಿದ ಪ್ರದೇಶಗಳಲ್ಲಿ ಒಂದೆಂದು ನಂಜುಂಡಪ್ಪ ವರದಿಯಲ್ಲಿ ಗುರುತಿಸಲಾಗಿದೆ.

ಚಾರಿತ್ರಿಕವಾಗಿ ಹಟ್ಟಿ ಪಾಳೆಗಾರರ ಆಳ್ವಿಕೆಗೆ ಒಳಪಟ್ಟಿದ್ದರಿಂದ ಇದಕ್ಕೆ ನಾಯಕನಹಟ್ಟಿ ಎಂದು ಹೆಸರು ಬಂದಿದೆ. ಮ್ಯಾಸಬೇಡರ ಮೂರು ಕಟ್ಟೆಮನೆಗಳಲ್ಲಿ ಒಂದಾದ ಇದು ಸಾಂಸ್ಕೃತಿಕವಾಗಿ ಧಾರ್ಮಿಕ ಸಾಮರಸ್ಯ ಸಾರಿದ ಮಾನವತಾವಾದದ ಪ್ರತಿಪಾದಕ, ಕಾಯಕಯೋಗಿ, ಪವಾಡಪುರುಷ, ಶ್ರೀ ಗುರುತಿಪ್ಪೇಸ್ವಾಮಿಯ ಕಾಯಕ ನೆಲೆ. ಇಲ್ಲಿ ಪ್ರತಿವರ್ಷ ನಡೆಯುವ ಜಾತ್ರೆ ಮಧ್ಯಕರ್ನಾಟಕದ ಅತೀ ದೊಡ್ಡ ಜಾತ್ರೆಗಳಲ್ಲಿ ಒಂದಾಗಿದ್ದು, ಅಪಾರ ಭಕ್ತ ಸಮೂಹವನ್ನು ಹೊಂದಿದೆ.

ಮಳೆಯಿಲ್ಲದ ಬರಡು ಭೂಮಿಯನ್ನು ಹೊಂದಿದ್ದರೂ, ಧಾರ್ಮಿಕವಾಗಿ, ಸಾಂಸ್ಕೃತಿಕವಾಗಿ ಶ್ರೀಮಂತಿಕೆಯನ್ನು ಹೊಂದಿರುವುದು ಇದರ ವಿಶೇಷತೆಯಾಗಿದೆ. ಅವುಗಳನ್ನು ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

ಅಧ್ಯಾಯ ಮೂರರಲ್ಲಿ ಈ ಪ್ರದೇಶದಲ್ಲಿ ನೆಲೆಸಿರುವ ಪ್ರಮುಖ ವೃತ್ತಿಗಾಯಕರಾದ ಕಿನ್ನರಿಜೋಗಿ, ಚೌಡಿಕೆಯರು, ದೊಂಬಿದಾಸ, ಸುಡುಗಾಡುಸಿದ್ದ, ಕುಲಮೂಲ ವೃತ್ತಿಯನ್ನು ಅಧ್ಯಯನ ಮಾಡುವುದರ ಜೊತೆಗೆ ಅವರ ಒನ್ನೆಲೆ, ದೈವಾಚರಣೆ, ಮತಪಂಥಗಳಂತ ವಿಷಯಗಳನ್ನು ಕುರಿತು ಅಧ್ಯಯನ ಮಾಡಲಾಗಿದೆ. ಜೊತೆಗೆ ಅವರ ಸಾಮಾಜಿಕ, ರಾಜಕೀಯ, ಆರ್ಥಿಕ, ಶೈಕ್ಷಣಿಕ, ಸ್ಥಿತಿಗತಿಗಳನ್ನು ಗುರುತಿಸುವುದರ ಜೊತೆಗೆ ಅವರಲ್ಲಿರುವ ಮೌಖಿಕ ಸಾಹಿತ್ಯ ಕುರಿತಾಗಿಯೂ ಚರ್ಚಿಸಲಾಗಿದೆ.

ಅಧ್ಯಾಯ ನಾಲ್ಕರಲ್ಲಿ ಅರೆವೃತ್ತಿಗಾಯಕರಾದ ಕೋಲುಮೇಳ, ಯಕ್ಷಗಾನ ಕಲಾವಿದರು(ಭಾಗವತರು), ಸೋಬಾನೆಯವರು, ಕಥೆ ಪುರಾಣ ಹೇಳುವರು, ಭಜನೆಯವರು ಇವರ ವೃತ್ತಿಯ ಮೂಲದ ಬಗ್ಗೆ ಹಾಗೂ ಭಾಷಿಕ, ಸಾಹಿತ್ಯಿಕ, ಸಾಮಾಜಿಕ, ಆರ್ಥಿಕ, ಶೈಕ್ಷಣಿಕ ಅಂಶಗಳನ್ನು ವಿವರಿಸಲಾಗಿದೆ.

ಅಧ್ಯಾಯ ಐದರಲ್ಲಿ ವೃತ್ತಿ–ಅರೆವೃತ್ತಿಗಾಯಕರ ತಾತ್ವಿಕತೆ ಗುರುತಿಸಲಾಗಿದೆ. ಇವರು ಹಾಡುವ ಹಾಡುಗಳು ಮನಸ್ಸಿಗೆ ನೆಮ್ಮದಿ, ಮೆದುಳಿಗೆ ತಿಳಿವು, ಕಣ್ಣುಕಿವಿಗಳಿಗೆ ಆನಂದ, ಆತ್ಮಕ್ಕೆ ದೈವೀಕಥೆಯನ್ನು ನೀಡುವ ಶಕ್ತಿಯನ್ನು ಹೊಂದಿವೆ. ಹೀಗೆ ಒಂದು ಕಾಲದಲ್ಲಿ ಸಮಾಜದ ಸಾಂಸ್ಕೃತಿಕ ಸಂವಹಕರಾಗಿ ಉತ್ತಮವಾದ ಸ್ಥಾನಮಾನ, ಘನತೆ ಗೌರವ, ಧಾರ್ಮಿಕ ಶ್ರದ್ಧೆ, ಸಾಮಾಜಿಕ ಸ್ವೀಕರಾರ್ಹ, ಪೂಜ್ಯನೀಯ ವ್ಯಕ್ತಿಗಳಾಗಿದ್ದರು. ಸಮಾಜದ ಓರೆಕೋರೆಗಳನ್ನು ತಿದ್ದುತ್ತಾ ಧಾರ್ಮಿಕ ಶ್ರದ್ಧೆಮಾಡಿಸುತ್ತಾ ಬಯಲು ಮನರಂಜನಾ ಕೇಂದ್ರಗಳಾಗಿ ಅಲ್ಪ ತೃಪ್ತಿಯಿಂದ ಕುಲವೃತ್ತಿ ತಮ್ಮ ಕರ್ತವ್ಯವೆಂದು ಭಾವಿಸಿ ಸಮಾಜದ ಒಳಿತಿಗಾಗಿ ಕಾರ್ಯನಿರ್ವಹಿಸುತ್ತಿದ್ದರು.

ಆದರೆ ಆಧುನಿಕ ಸಮೂಹ ಮಾಧ್ಯಮಗಳ ಹಾವಳಿ, ಲಿಖಿತ ಸಾಹಿತ್ಯದ ಆಕರ್ಷಣೆ, ಸಿನಿಮಾ, ರಂಗಭೂಮಿ, ವಿದ್ಯುನ್ಮಾನ ತಾಂತ್ರಿಕತೆ ಉಪಗ್ರಹ ಆಧಾರಿತ ಕಾರ್ಯಕ್ರಮಗಳು, ಗಣಕ ಯಂತ್ರಗಳ ಬಳಕೆ ಮೊದಲಾದ ಆಧುನಿಕ ದೃಕ್ ಶ್ರವಣೋಪಕರಣಗಳ ಸಂವಹನ ಮಾಧ್ಯಮಗಳಿಂದ ಹಾಗೂ ಜಾಗತೀಕರಣ, ಸಂಸ್ಕೃತೀಕರಣ ಮೊದಲಾದ ಅಂಶಗಳ ಪರಿಣಾಮದಿಂದ ಪ್ರಸ್ತತ ವೃತ್ತಿ–ಅರೆವೃತ್ತಿಗಾಯಕರು ಸಮಾಜದ ಸಾಂಸ್ಕೃತಿಕ ಜೀವನದಿಂದ ಕಣ್ಮರೆಯಾಗುತಿದ್ದಾರೆ. ಹಾಗೂ ತಮ್ಮ ಹೊಟ್ಟೆಯ ಹೊರೆ ನಿರ್ವಹಿಸಿಕೊಳ್ಳಲು ಅನ್ಯವೃತ್ತಿಗಳನ್ನು ಅವಲಂಬಿಸಬೇಕಾಗಿರುವುದು ಅನಿವಾರ್ಯವಾಗಿದೆ. ಇಂತಹ ಗಾಯಕ ವರ್ಗದ ಪ್ರಸ್ತುತ ಸಮಸ್ಯೆಗಳನ್ನು, ಅವುಗಳಿಗೆ ಕಾರಣಗಳನ್ನು ಶೋಧಿಸಿ, ಚರ್ಚಿಸಿ ವಿಶ್ಲೇಷಿಸಿ ಸಲಹೆ ಮತ್ತು ಪರ್ಯಾಯಗಳನ್ನು ಅಧ್ಯಯನದ ಮಿತಿಯಲ್ಲಿಯೇ ನೀಡಲಾಗಿದೆ.

ಕೊನೆಯದಾಗಿ ಅಧ್ಯಾಯ ಆರು ಸಮಾರೋಪ. ಒಟ್ಟಾರೆಯಾಗಿ ಈ ಅಧ್ಯಾಯದಲ್ಲಿ ಪ್ರಬಂಧದ ಫಲಿತಗಳನ್ನು ಹೇಳುತ್ತಾ ಇಲ್ಲಿಯವರೆಗೆ ನಡೆದಿರುವ ಅಧ್ಯಯನದ ಮಿತಿಗಳನ್ನು ಗುರುತಿಸಿಲಾಗಿದೆ. ಈ ಅಧ್ಯಯನದಿಂದ ಮುಂದೆ ವೃತ್ತಿ-ಅರೆವೃತ್ತಿಗಾಯಕ ಸಮುದಾಯಗಳನ್ನು ಕುರಿತು ಅಧ್ಯಯನ ಮಾಡುವವರಿಗೆ ಹೇಗೆ ಮಾದರಿಯಾಗುತ್ತದೆ. ಹಾಗೆ ಇದನ್ನು ಹೊರತುಪಡಿಸಿ ಮುಂದೆ ಹೇಗೆ ಅಧ್ಯಯನ ಮಾಡಬಹುದೆಂಬುದನ್ನು ಚರ್ಚಿಸಲಾಗಿದೆ.

**ಇದುವರೆಗೆ ನಡೆದಿರುವ ಅಧ್ಯಯನಗಳ ಸಮೀಕ್ಷೆ :**

ನಮ್ಮ ರಾಜ್ಯದಲ್ಲಿ ವೃತ್ತಿಗಾಯಕರನ್ನು ಕುರಿತು ಸ್ವಾತಂತ್ರ್ಯ ಪೂರ್ವದಿಂದ ಅಧ್ಯಯನಗಳು ನಡೆದಿರುವುದನ್ನು ಅವುಗಳ ಹಿನ್ನೆಲೆಯಿಂದ ಗುರುತಿಸಬಹುದಾದರೂ ಅವರ ಬಗ್ಗೆ ಅಧಿಕೃತವಾಗಿ ಅಧ್ಯಯನ ನಡೆದಿದ್ದು ಸ್ವಾತಂತ್ರ್ಯ ನಂತರ. ಈ ಅವಧಿಯಲ್ಲಿ ನಡೆದಿರುವ ಕೆಲವು ಅಧ್ಯಯನಗಳ ಪರಿಚಯವನ್ನು ಸಂಕ್ಷಿಪ್ತವಾಗಿ ಈ ಕೆಳಗಿನಂತೆ ನೋಡಬಹುದು.

ರಾ.ರ. ಕುಪ್ಪಸದ ಅವರ 'ನಮ್ಮ ನಾಡಿನ ಭಿಕ್ಷುಕರು' ಕೃತಿಯಲ್ಲಿ ಅನೇಕ ವೃತ್ತಿಗಾಯಕರ ಬಗ್ಗೆ, ಅವರ ಆಚರಣೆ, ಸಂಪ್ರದಾಯಗಳನ್ನು ಚರ್ಚಿಸಲಾಗಿದೆ. ಬಿ.ವಿ. ಮಹಷಿವಾಡಿಯವರ 'ಕನ್ನಡ ಕಥಾಸೃಷ್ಟಿ' ಕೃತಿಯಲ್ಲಿ ಜನಪದ ವೃತ್ತಿಗಾಯಕ ಪರಂಪರೆಗಳನ್ನು ಕ್ರಮಬದ್ಧವಾಗಿ ವಿವರಿಸಿದ್ದಾರೆ.

೧೯೬೨ರಲ್ಲಿ ಪ್ರಕಟವಾದ ಕ.ರಾ.ಕೃ ಅವರ 'ಜನಪದ ಕಥನ ಗೀತೆಗಳು' ಕೃತಿಯಲ್ಲಿ ದೊಂಬಿದಾಸರ ಪರಿಚಯವನ್ನು ಹೇಳಿರುವರು. ೧೯೬೫ರಲ್ಲಿ ಮತಿಘಟ್ಟ ಕೃಷ್ಣಮೂರ್ತಿಯವರ 'ಏಳುಕೊಳ್ಳದ ಎಲ್ಲಮ್ಮ' ಕೃತಿಯಲ್ಲಿ ಚೌಡಿಕೆ ಸಂಪ್ರದಾಯದವರನ್ನು ಗುರುತಿಸುವರು. ೧೯೬೭ರಲ್ಲಿ ನಂಜುಂಡ ಪಂಡಿತರವರ ಸಚಿತ್ರ ಗಿಳಿಹಾಡು, ಅರ್ಜುನ ಜೋಗಿ ಹಾಡು ಕಿನ್ನರಜೋಗಿಗಳ ಪರಿಚಯ ಮಾಡಿಕೊಡುವ ಕೃತಿಯಾಗಿದೆ. ಪಿ.ಕೆ. ರಾಜಶೇಖರ ಅವರ ಮಲೆಯ ಮಹದೇಶ್ವರ ಸಂಪುಟ-೧ ಮತ್ತು ೨ರಲ್ಲಿ ಕಂಸಾಳೆಯವರನ್ನು ಗುರುತಿಸಲಾಗಿದೆ. ಗೊ.ರು. ಚನ್ನಬಸಪ್ಪನವರ 'ಕರ್ನಾಟಕದ ಜನಪದ ಕಲೆಗಳು' ಕೃತಿಯಲ್ಲಿ ಹಲವಾರು ವೃತ್ತಿಗಾಯಕ ಸಂಪ್ರದಾಯಗಳನ್ನು ತಿಳಿಸಿರುವರು. ಎಂ.ಎಂ. ಕಲ್ಬುರ್ಗಿ ಅವರ 'ಉತ್ತರ ಕರ್ನಾಟಕದ ಜನಪದ ಪದ್ಯ ಸಾಹಿತ್ಯ' ಗ್ರಂಥದಲ್ಲಿ ವೃತ್ತಿಗಾಯಕರ ಸಂಕ್ಷಿಪ್ತ ಪರಿಚಯವನ್ನು ಮಾಡಿಕೊಟ್ಟಿರುವರು.

ನಮ್ಮ ರಾಜ್ಯದಲ್ಲಿ ವೃತ್ತಿಗಾಯಕರನ್ನು ಮತ್ತು ಅವರ ಕಾವ್ಯ ಪ್ರಕಾರಗಳನ್ನು ಗುರುತಿಸಿ ಅಧ್ಯಯನ ಮಾಡಿದ ಕೀರ್ತಿ ಜೀ.ಶಂ. ಪರಮಶಿವಯ್ಯನವರಿಗೆ ಸಲ್ಲುತ್ತದೆ. ಇವರ ಸಂಶೋಧನಾ ಕೃತಿಯಾದ "ದಕ್ಷಿಣ ಕರ್ನಾಟಕದ ಜನಪದ ಕಾವ್ಯ ಪ್ರಕಾರಗಳು" ವೃತ್ತಿಗಾಯಕರ ಕುರಿತ ಸವಿವರವಾದ ಶ್ರೇಷ್ಠ ಕೃತಿಯಾಗಿದ್ದು, ಯುವ ಸಂಶೋಧಕರಿಗೆ ದಿಕ್ಸೂಚಿಯಾಗಿದೆ. ಇವರ ಹಲವಾರು ಕೃತಿಗಳು ವೃತ್ತಿಗಾಯಕರ ಮೇಲೆ ಬೆಳಕು ಚೆಲ್ಲುತ್ತವೆ. ಡಾ. ಅಂಬಳಿಕೆ ಹಿರಿಯಣ್ಣ ಅವರ

‘ಕಾಡುಗೊಲ್ಲರ ಜನಪದ ಗೀತೆಗಳು’ ಲೌಕಿಕ ಸಂಪ್ರದಾಯದ ಚೌಡಿಕೆ ಕಾವ್ಯಗಳು, ಡಿ.ಕೆ. ರಾಜೇಂದ್ರ ಅವರ ‘ಕರಪಾಲಮೇಳ’ ಮೊದಲಾದ ಕೃತಿಗಳು ವೃತ್ತಿಗಾಯಕರ ಪ್ರಕಾರಗಳ ಮೇಲೆ ಬೆಳಕು ಚೆಲ್ಲುತ್ತವೆ. ಎಚ್.ಎಲ್. ನಾಗೇಗೌಡರ ‘ಹೆಳವರು ಮತ್ತು ಅವರ ಕಾವ್ಯಗಳು’ ಅವರ ಸಂಪ್ರದಾಯ, ಆಚರಣೆಗಳನ್ನು ಗುರುತಿಸುತ್ತವೆ. ಕ್ಯಾತನಹಳ್ಳಿ ರಾಮಣ್ಣನವರ ‘ಜಾನಪದ ವಿಹಾರ’ ಕೃತಿಯಲ್ಲಿ ಉತ್ತರ ಕರ್ನಾಟಕದ ಧಾರ್ಮಿಕ ವೃತ್ತಿಗಾಯಕರನ್ನು ಗುರುತಿಸಿರುವರು.

ನಾಯಕನಹಟ್ಟಿ ಪರಿಸರದಲ್ಲಿ ವೃತ್ತಿಗಾಯಕರನ್ನು ಕುರಿತು ಪ್ರತ್ಯೇಕವಾದ ಅಧ್ಯಯನಗಳು ನಡೆಯದಿದ್ದರೂ ಇಲ್ಲಿನ ಮೌಖಿಕ ಪರಂಪರೆ, ಸಂಸ್ಕೃತಿಗೆ ಸಂಬಂಧಿಸಿದಂತೆ ಕೆಲವು ಕೃತಿಗಳು ಬೆಳಕು ಚೆಲ್ಲುತ್ತವೆ. ಅವುಗಳಲ್ಲಿ ಪ್ರಮುಖ ಕೃತಿಗಳೆಂದರೆ ಕೃಷ್ಣಮೂರ್ತಿ ಹನೂರು ಅವರ ‘ಮ್ಯಾಸಬೇಡರ ಸಂಸ್ಕೃತಿ’, ಮೀರಾಸಾಬಿಹಳ್ಳಿ ಶಿವಣ್ಣನವರ ‘ಮ್ಯಾಸಮಂಡಲ’, ‘ಕಾಡುಗೊಲ್ಲರ ಸಾಂಸ್ಕೃತಿಕ ವೀರರು’, ‘ದುರ್ಗಜಾನಪದ’ ಮೈಲಳ್ಳಿ ರೇವಣ್ಣನವರ ‘ದುರ್ಗದ ಸುತ್ತಿನ ಜಾನಪದ ಕಾವ್ಯಗಳು’, ವಿರೂಪಾಕ್ಷಿ ಪೂಜಾರಹಳ್ಳಿ ಅವರ ‘ಚಿತ್ರದುರ್ಗ ಜಿಲ್ಲೆಯ ಬುಡಕಟ್ಟು ವೀರರು’, ಎಸ್.ಎಂ. ಮುತ್ತಯ್ಯ ಅವರ ‘ಜಾನಪದ ಸಂಕಥನ’ ಮೊದಲಾದವು ಇಲ್ಲಿನ ಮೌಖಿಕ ಸಾಹಿತ್ಯದ ಕುರಿತು ಅಲ್ಲಿನ ವೃತ್ತಿ–ಅರೆವೃತ್ತಿಗಾಯಕರ ಸಮುದಾಯದ ಪರಿಚಯವನ್ನು ಮಾಡಿಕೊಟ್ಟಿವೆ. ಆದರೂ ಸಮಗ್ರವಾಗಿ ಅವರ ಕುರಿತಾಗಿಯೇ ಅಖಂಡವಾಗಿ ಬೆಳಕು ಚೆಲ್ಲುವುದಿಲ್ಲ. ಈ ಕೊರತೆಯನ್ನು ತಕ್ಕಮಟ್ಟಿಗೆಯಾದರೂ ನಿಗಿಸುವ ಸದುದ್ದೇಶದಿಂದ ನಾನು ಅಧ್ಯಯನಕ್ಕೆ ನಾಯಕನಹಟ್ಟಿ ಪರಿಸರದ ಮೌಖಿಕ ಸಾಹಿತ್ಯದಲ್ಲಿ ‘ವೃತ್ತಿ–ಅರೆವೃತ್ತಿಗಾಯಕರು : ಸಾಂಸ್ಕೃತಿಕ ಅಧ್ಯಯನ’ ಎಂಬ ವಿಷಯವನ್ನು ಮಾಡಿಕೊಂಡು ತನ್ಮೂಲಕ ಅವರ ಕುರಿತಾಗಿ ಅಧ್ಯಯನ ಮಾಡುವುದು ಇದರ ಪ್ರಮುಖ ಉದ್ದೇಶ.

## ಅಧ್ಯಾಯ – ಎರಡು

# ನಾಯಕನಹಟ್ಟಿ ಪರಿಸರದ ಭೌಗೋಳಿಕ, ಚಾರಿತ್ರಿಕ ಮತ್ತು ಸಾಂಸ್ಕೃತಿಕ ಹಿನ್ನೆಲೆ

೨.೧. ನಾಯಕನಹಟ್ಟಿ ಪರಿಸರದ ಭೌಗೋಳಿಕ ಲಕ್ಷಣಗಳು
೨.೨. ನಾಯಕನಹಟ್ಟಿಯ ಚಾರಿತ್ರಿಕ ಹಿನ್ನೆಲೆ
೨.೩. ನಾಯಕನಹಟ್ಟಿಯ ಸಾಂಸ್ಕೃತಿಕ ಹಿನ್ನೆಲೆ

## ಅಧ್ಯಾಯ – ೨

# ನಾಯಕನಹಟ್ಟಿ ಪರಿಸರದ ಭೌಗೋಳಿಕ, ಚಾರಿತ್ರಿಕ ಮತ್ತು ಸಾಂಸ್ಕೃತಿಕ ಹಿನ್ನೆಲೆ

### ೨.೧. ನಾಯಕನಹಟ್ಟಿಯ ಭೌಗೋಳಿಕ ಅಂಶಗಳು :

ನಮ್ಮ ರಾಜ್ಯದ ಮಧ್ಯಭಾಗದ ಪೂರ್ವದಂಚಿನಲ್ಲಿರುವ ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆ ತಾಲೂಕಿನ ಬರುವ ಐತಿಹಾಸಿಕ ಕ್ಷೇತ್ರ. ನಾಯಕನಹಟ್ಟಿ. ಇದು ಧಾರ್ಮಿಕ ಸಾಮರಸ್ಯದ ನೆಲೆ. ಬುಡಕಟ್ಟು ಸಂಸ್ಕೃತಿಯ ತವರು. ಹಟ್ಟಿಜಾತ್ರೆಯ ಸಾಂಸ್ಕೃತಿಕ ಬೀಡಾಗಿದೆ. ಇಂತಹ ಪುಣ್ಯಕ್ಷೇತ್ರದ ಮಹತ್ವವನ್ನು ಅಲ್ಲಿನ ಪರಿಸರ, ಐತಿಹಾಸಿಕ, ಭೌಗೋಳಿಕ, ಸಾಂಸ್ಕೃತಿಕ ವೈಶಿಷ್ಟ್ಯತೆಯ ಮೂಲಕ ಗುರುತಿಸಲಾಗಿದೆ.

**ನಾಯಕನಹಟ್ಟಿಯ ಭೌಗೋಳಿಕ ಪರಿಸರ :**

ಒಂದು ಪ್ರದೇಶವನ್ನು ಕುರಿತ ಅಧ್ಯಯನ ಕೈಗೊಳ್ಳುವ ಮೊದಲು ಆ ಪ್ರದೇಶದ ಭೌಗೋಳಿಕ ಲಕ್ಷಣಗಳನ್ನು ಅರಿಯುವುದು ಅತ್ಯಾವಶ್ಯಕ. ಯಾಕೆಂದರೆ ಆ ಪ್ರದೇಶದ ಜನಜೀವನ, ಪರಿಸರದ ಸ್ವರೂಪ ಮತ್ತು ಭೌಗೋಳಿಕ ವೈಶಿಷ್ಟ್ಯತೆಗಳನ್ನು ತಿಳಿಯದೇ ಹೋದರೆ ಯಾವುದೇ ಅಧ್ಯಯನ ಅಪೂರ್ಣ. ಅಸ್ಪಷ್ಟ.

"ಪ್ರಾಚೀನ ನಾಗರೀಕತೆಗಳ ಉಗಮ ಮತ್ತು ವಿಕಾಸ ನದಿ ತೀರಗಳ ಹತ್ತಿರ ಆಗಿರುವುದು ಗಮನಿಸಿದರೆ ಅಲ್ಲಿಯ ಪ್ರಾಕೃತಿಕ ಅಂಶಗಳ ಮಹತ್ವ ತಿಳಿಯುತ್ತದೆ. ಈ ಹಿನ್ನೆಲೆಯಲ್ಲಿ ಆಯಾ ಪ್ರದೇಶದ ಚರಿತ್ರೆ ಮತ್ತು ಸಂಸ್ಕೃತಿಗಳ ವಿಕಾಸದಲ್ಲಿ ಅಲ್ಲಿನ ಭೌಗಳಿಕ ಪರಿಸರ, ಸಂಪತ್ತು ಮತ್ತು ವೈಶಿಷ್ಟ್ಯತೆಗಳು ಬಹುಮುಖ್ಯ ಪಾತ್ರವನ್ನು ವಹಿಸುತ್ತವೆ."[೧]

ಒಂದು ಪ್ರದೇಶದಲ್ಲಿ ಮಾನವ ನೆಲೆ ನಿಲ್ಲಲು ಆ ಪ್ರದೇಶದಲ್ಲಿ ಹುಟ್ಟಿ ಹರಿಯುವ ನದಿ, ಝುರಿ, ಹಳ್ಳ-ಕೊಳ್ಳ, ಬೆಟ್ಟ-ಗುಡ್ಡ, ಪರ್ವತ ಪ್ರದೇಶ, ಭೂರಚನೆ, ಹವಾಮಾನ, ವಾಯುಗುಣ ಮೊದಲಾದ ಪ್ರಾಕೃತಿಕ ಅಂಶಗಳು ಕಾರಣ. ಅಲ್ಲದೆ ಭೌಗೋಳಿಕ ಪರಿಸರವು ಅಲ್ಲಿನ ಜನಜೀವನ ಮತ್ತು ಸಾಂಸ್ಕೃತಿಕ ವಿಚಾರಗಳನ್ನು ತಿಳಿಸುವ ಸಾಧನ. ಪ್ರತಿಯೊಂದು ಪ್ರದೇಶವು ಭೌಗೋಳಿಕವಾಗಿ ವಿಶಿಷ್ಟ ವಾಯುಗುಣವನ್ನು ಹೊಂದಿದೆ. ಅವುಗಳನ್ನು ನಾವು ಮಲೆನಾಡು, ಅರೆ ಮಲೆನಾಡು, ಕರಾವಳಿ, ಬಯಲಿ ಸೀಮೆ, ಉತ್ತರ ಮೈದಾನ ಪ್ರದೇಶಗಳೆಂದು ಗುರುತಿಸುತ್ತೇವೆ. ಪ್ರಸ್ತುತ ನಾಯಕನಹಟ್ಟಿಯು ಬಯಲು ಸೀಮೆಯ ಭೌಗೋಳಿಕ ಪ್ರದೇಶದಲ್ಲಿ ಬರುತ್ತದೆ. ಈ ಭೌಗೋಳಿಕ ಲಕ್ಷಣಗಳು ಯಾವ ರೀತಿ ಇಲ್ಲಿನ ಜನಜೀವನದ ಮೇಲೆ ಪ್ರಭಾವ ಬೀರಿವೆ ಎಂಬುದನ್ನು ಚರ್ಚಿಸಲಾಗಿದೆ. ನಮ್ಮ ರಾಜ್ಯದ ಮಧ್ಯಭಾಗದಲ್ಲಿ ಬರುವ ಚಿತ್ರದುರ್ಗ ಜಿಲ್ಲೆಯ ಪ್ರಾಕೃತಿಕ ಲಕ್ಷಣಗಳಲ್ಲಿ ಬಯಲು ಪ್ರದೇಶವೆಂದು ಗುರುತಿಸಲ್ಪಡುತ್ತದೆ. ಇಂತಹ ಬಯಲು ಪ್ರದೇಶವಾದರೂ ತನ್ನದೆಯಾದ ಐತಿಹಾಸಿಕ, ಸಾಂಸ್ಕೃತಿಕ, ಧಾರ್ಮಿಕ ವೈಶಿಷ್ಟ್ಯತೆಯನ್ನು ಹೊಂದಿದೆ.

ಈ ಜಿಲ್ಲೆಯ ಆರು ತಾಲೂಕು ಕೇಂದ್ರಗಳಲ್ಲಿ ಒಂದಾಗಿರುವ ಚಳ್ಳಕೆರೆ ತಾಲೂಕಿನ ಹೋಬಳಿ ಕೇಂದ್ರವಾದ ನಾಯಕನಹಟ್ಟಿ, ಪಶ್ಚಿಮಕ್ಕೆ ಜಗಳೂರು ಮತ್ತು ಚಿತ್ರದುರ್ಗ ತಾಲೂಕುಗಳು, ದಕ್ಷಿಣಕ್ಕೆ ಪಕ್ಕದ ಚಳ್ಳಕೆರೆ, ಕಸಬಾಹೋಬಳಿ, ಪೂರ್ವಕ್ಕೆ ತಳಕು ಹೋಬಳಿ, ಉತ್ತರಕ್ಕೆ ಕೂಡ್ಲಿಗಿ ತಾಲೂಕಿನೊಂದಿಗೆ ತನ್ನ ಎಲ್ಲೆಯನ್ನು ಹೊಂದಿದೆ.

ಇಂತಹ ಸಾಂಸ್ಕೃತಿಕ ಸಾಮರಸ್ಯದ ಬುಡಕಟ್ಟು ವೀರರ ತವರೂರು, ಮೌಖಿಕ ಪರಂಪರೆ ನೆಲೆ ನಾಡಾದ ಈ ಕ್ಷೇತ್ರವು ಜಿಲ್ಲಾ ಕೇಂದ್ರದಿಂದ ಈಶಾನ್ಯಕ್ಕೆ ೩೦ ಕಿ.ಮೀ. ದೂರ, ತಾಲೂಕಿನ ಕೇಂದ್ರದಿಂದ ವಾಯುವ್ಯಕ್ಕೆ ೨೦ ಕಿ.ಮೀ. ದೂರವಿದೆ. ಈ "ಪ್ರದೇಶವು ೧೪.೦೫-೧೪.೩೭ ಎತ್ತರ ಅಕ್ಷಾಂಶದವರೆಗೂ, ೭೬,೨೭-೭೭,೦ ರೇಖಾಂಶದವರೆಗೂ"[೨] ವಿಸ್ತಾರ ಹೊಂದಿದೆ.

ಈ ಪ್ರದೇಶವು ಒಣ, ಶುಷ್ಕ ವಾಯುಗುಣವನ್ನು ಹೊಂದಿದ್ದು, ಮಳೆಯ ಪ್ರಮಾಣ ೪೭೭.೬. ಮೀ.ಮಿ, ಸಮುದ್ರ ಮಟ್ಟಕ್ಕಿಂತ ೧೭೮೯ ಅಡಿಗಳ ಎತ್ತರ ಹೊಂದಿದ್ದು, ಚಳಿಗಾಲದಲ್ಲಿ ಅತಿ ತಂಪಾದ ವಾತಾವರಣವನ್ನು ಹೊಂದಿದ್ದು ಅಂದರೆ ನವೆಂಬರ್, ಡಿಸೆಂಬರ್ ತಿಂಗಳಲ್ಲಿ ಉಷ್ಣತೆಯ ಪ್ರಮಾಣ ೧೪ರಷ್ಟು ಸೆಲ್ಸಿಯಸ್ ಹವಾಮಾನ ದಾಖಲಾಗಿರುವುದು. ಹಾಗೆಯೇ ಬೇಸಿಗೆ ಕಾಲದಲ್ಲಿ ಅಂದರೆ ಏಪ್ರಿಲ್, ಮೇ ತಿಂಗಳುಗಳಲ್ಲಿ ಉಷ್ಣತೆಯ ಪ್ರಮಾಣ ೪೦ರಷ್ಟು ಸೆಲ್ಸಿಯಸ್ ಹವಾಮಾನ ದಾಖಲಾಗಿದೆ. ಒಟ್ಟಿನಲ್ಲಿ ಈ ಪ್ರದೇಶವು ಸದಾ ಬರಗಾಲವನ್ನು ತನ್ನ ಒಡಲಿಗೆ ಕಟ್ಟಿಕೊಂಡು ಬದುಕುತ್ತಿರುವ ಅತೀ ಹಿಂದುಳಿದ ಪ್ರದೇಶಗಳಲ್ಲಿ ಒಂದಾಗಿದೆಯೆಂಬುದನ್ನು ಡಾ. ಡಿ.ಎಂ. ನಂಜುಂಡಪ್ಪನವರ ವರದಿಯಲ್ಲಿ ಉಲ್ಲೇಖಿಸಲಾಗಿದೆ.

**ಭೂರಚನೆ :**

ವಿಶ್ವದ ಭೌಗೋಳಿಕ ಭೂಪಟದಲ್ಲಿ ಜಿಲ್ಲೆಯ 'ಪಿಲ್ಲಾಲಾವೊ' ಶಿಲಾ ಪದರವೂ (ಮೆದುಳಿನ ಆಕಾರ) ಭೂರಚನೆಯ ಉಗಮದ ಇತಿಹಾಸದಲ್ಲಿ ತನ್ನದೆಯಾದ ಪ್ರಾಮುಖ್ಯತೆಯನ್ನು ಹೊಂದಿದೆ. ತನ್ನದೆಯಾದ ಭೌಗೋಳಿಕ ಲಕ್ಷಣಗಳನ್ನು ಹೊಂದಿರುವ ಚಿತ್ರದುರ್ಗ ಜಿಲ್ಲೆಯು ಭೂರಚನೆಯಲ್ಲಿ ವೈವಿಧ್ಯತೆಯನ್ನು, ಭಿನ್ನತೆಯನ್ನು ಹೊಂದಿದೆ.

ಈ ಭೂಪ್ರದೇಶದಲ್ಲಿ ಬರುವ ನಾಯಕನಹಟ್ಟಿಯು ಹೆಚ್ಚಾಗಿ ಉಬ್ಬು-ತಗ್ಗುಗಳಿಂದ ಕೂಡಿದ ಅಲ್ಪ-ಸ್ವಲ್ಪ ಸಮತಟ್ಟಾದ ಮೈದಾನ ಪ್ರದೇಶದಿಂದ ಆವೃತವಾದ ಕಲ್ಲು ಜರುಗಿನಿಂದ ಕೂಡಿದ ಕಲ್ಲು ಮಿಶ್ರಿತ ಕೆಂಪು ಮಣ್ಣು ಹಾಗೂ ಮರಳು ಮಿಶ್ರಿತ ಮಣ್ಣು ಮತ್ತು ಕಟ್ಟು ಮಣ್ಣನ್ನು ಹಾಗೂ ಲವಣಯುಕ್ತ ಭೂಮಿಯನ್ನು ಒಳಗೊಂಡಿರುವ ಭೂಪ್ರದೇಶವಾಗಿದೆ.

**ಅರಣ್ಯ ಪ್ರದೇಶ (ಸಸ್ಯ ಸಂಪತ್ತು)**

ಇದು ಅತಿ ಕಡಿಮೆ ಮಳೆ ಬೀಳುವ ಪ್ರದೇಶಗಳಲ್ಲಿ ಒಂದಾಗಿದ್ದು 'ಬಯಲು ಸೀಮೆ' ಎಂದು ಕರೆಯುವ ಈ ಪ್ರದೇಶಗಳಲ್ಲಿ ಹೇಳಿಕೊಳ್ಳುವಂತಹ ಕಾಡು ಕಾಣುವುದಿಲ್ಲ. ಆದರೆ ಅಲ್ಲಲ್ಲಿ ಕುರುಚಲು ಸಸ್ಯವರ್ಗ, ಪೊದರುಗಳನ್ನು ಹಾಗೂ ಕಾಯ್ದಿಟ್ಟ ಅರಣ್ಯ ಪ್ರದೇಶಗಳನ್ನು ಕಾಣಬಹುದು.

ಈ ಕುರುಚಲು ಸಸ್ಯವರ್ಗದ ವಿಶೇಷಯೆಂದರೆ ಬೇಸಿಗೆಯಲ್ಲಿ ಒಣಗಿ ಎಲೆಗಳನ್ನು ಉದುರಿಸುವುದರ ಮೂಲಕ ಬೋಳಾಗಿ ಕಂಡರೆ, ಮಳೆಗಾಲದಲ್ಲಿ ಚಿಗುರುವುದರ ಮೂಲಕ ಪ್ರಕೃತಿ ಸೌಂದರ್ಯವನ್ನು ಇಮ್ಮಡಿಗೊಳಿಸುತ್ತವೆ.

ಈ ಪರಿಸರದಲ್ಲಿ ಕಂಡುಬರುವ ಸಸ್ಯವರ್ಗವನ್ನು ನಾಲ್ಕು ಭಾಗಗಳಾಗಿ ವಿಂಗಡಿಸಲಾಗಿದೆ. ಮೊದಲನೆಯದಾಗಿ ನೆಲಮಟ್ಟದಿಂದ ೪ ಅಡಿಗಳವರೆಗೂ ಬೆಳೆಯುವ ಗಿಡ-ಗಂಟಿಗಳು, ಪೊದರೆಗಳೆಂದರೆ ಕಕ್ಕೆ, ತಂಗಡಿ, ನೆಲಬಂದರಿ, ಕಾರೆ, ಎಕ್ಕೆ, ಪಲವರ. ಎರಡನೆಯದಾಗಿ ಎತ್ತರವಾಗಿ ಬೆಳೆದು ಡಿಸೆಂಬರ್ ತಿಂಗಳನಿಂದ ಎಲೆಗಳನ್ನು ಉದುರಿಸಿ ಮತ್ತೆ ವಸಂತ ಮಾಸದಲ್ಲಿ ಅಂದರೆ ಮಾರ್ಚ್ ತಿಂಗಳನಲ್ಲಿ ಚಿಗರುವ ಮರ-ಗಿಡಗಳೆಂದರೆ ಬೇವು, ಜಾಲಿ, ಬ್ಯಾಲ, ಹುಣುಸೆ, ಬಾರೆ, ಆರೆ, ಹಿಪ್ಪೆ, ಹೊಂಗೆ, ಅರಳಿಮರ ಇತ್ಯಾದಿ. ಮೂರನೆಯದಾಗಿ ಹಾಲು ತುಂಬಿದ, ಎಲೆರಹಿತವಾದ ಗಿಡ-ಗಂಟಿಗಳೆಂದರೆ ಕಳ್ಳಿಮರ, ಮಂಡಗಳ್ಳಿ (ಬಂದಗಳಿ) ಗಿಡಗಳು. ನಾಲ್ಕನೆಯದಾಗಿ ಹಣ್ಣು-ಹಂಪಲ ನೀಡುವ ಗಿಡಗಳೆಂದರೆ ಕವಳೆ, ಕಾರೆ, ಸೀತಾಫಲ, ಆಲದಮರ, ಅತ್ತಿಮರ, ನೆರಳೆಮರ, ಮೊದಲಾದವು.

**ಪ್ರಮುಖ ಪ್ರಾಣಿಗಳು :** ಈ ಹವಾಮಾನ, ವಾಯುಗುಣಕ್ಕೆ ಕುರುಚಲ ಸಸ್ಯವರ್ಗಕ್ಕೆ ತಕ್ಕಂತೆ ವಾಸಿಸುವ ಪ್ರಮುಖ ಪ್ರಾಣಿಗಳೆಂದರೆ ಚಿಗರೆ (ಜಿಂಕೆ), ಮೊಲ, ಚಿರತೆ, ಕರಡಿ, ಮುಂಗಸಿ, ಹಾವು,

ಉಡ, ಕಾಡುಹಂದಿ, ನರಿ, ತೋಳ, ಅಳಿಲು, ಕಾಡುಬೆಕ್ಕು ಮೊದಲಾದವು. ಪಕ್ಷಿಗಳೆಂದರೆ ನವಿಲು, ಬೆಳವ, ಕವುಜಗ, ಪಾರಿವಾಳ, ಗುಬ್ಬಚ್ಚಿ, ಕಾಗೆ, ಕೆಂಪುಕಾಗೆ ಮೊದಲಾದವು.

**ಬೆಟ್ಟ-ಗುಡ್ಡಗಳು :** ಬೆಟ್ಟ-ಗುಡ್ಡಗಳು, ಗಿರಿ ಕಂದರಗಳು ಪ್ರರ್ವತ ಪ್ರದೇಶಗಳು ನಿಸರ್ಗದ ಉಚಿತ ನೈಸರ್ಗಿಕ ಸಂಪನ್ಮೂಲಗಳಾಗಿವೆ. ಹಾಗೆಯೇ ಇವು ದೈವ ಸ್ವರೂಪ ಪಡೆದುಕೊಂಡು ಪ್ರಮುಖ ಆರಾಧನ ಶಕ್ತಿಕೇಂದ್ರಗಳಾಗಿ ನಮ್ಮ ಜನಪದರಲ್ಲಿ ಆಚರಣೆಗೆ ಒಳಗಾಗಿವೆ. ಉದಾ: ಬೆಟ್ಟ-ಗುಡ್ಡಗಳಿಗೆ ಸ್ಥಳೀಯ ಸಾಂಸ್ಕೃತಿಕ ವೀರರ ಹೆಸರನ್ನು ಇಡುವುದರ ಮೂಲಕ ಅವುಗಳಿಗೆ ದೈವ ಸ್ವರೂಪದ ಮಹತ್ವವನ್ನು ನೀಡಿರುವರು. ಹಾಗೆಯೇ ಮರಗಳಿಗೆ ಆದಿಶಕ್ತಿಯ ವಿವಿಧ ರೂಪಗಳಾದ ಚೌಡಮ್ಮ, ಕೊಲ್ಲೂರಮ್ಮ, ಬನ್ನಿಮಂಕಳಮ್ಮ, ಮಾರಮ್ಮ, ದುರ್ಗಮ್ಮ ಮೊದಲಾದ ಹೆಸರುಗಳಿಂದ ಜಾಲಿ, ಬೇವು, ಆಲದ, ಅರಳಿ, ಬ್ಯಾಲ ಮೊದಲಾದ ಮರಗಳಿಗೆ ದೇವಿಯ ಹೆಸರಿನಲ್ಲಿ ಕೆಂಪು ಬಟ್ಟೆಕಟ್ಟಿ ಬಳೆಗಳಿಂದ ಸಿಂಗರಿಸಿ ಪೂಜೆ ಮಾಡುವುದರ ಮೂಲಕ ದೈವ ಮಹತ್ವವನ್ನು ಮತ್ತು ಅರಣ್ಯ ನಾಶವನ್ನು ತಡೆಯುವುದರ ಮೂಲಕ ಪರಿಸರ ಸಂರಕ್ಷಣೆ ಮಾಡುತ್ತಾರೆಂದು ಹೇಳಬಹುದು.

ಹೀಗೆ ಇವು ಮಾನವನ ಜೀವನ, ಸಂಸ್ಕೃತಿಯ ಮೇಲೆ ಪ್ರತ್ಯಕ್ಷ ಮತ್ತು ಪರೋಕ್ಷವಾಗಿ ಪ್ರಭಾವ ಬಿರುತ್ತವೆ. ಪ್ರಾಚೀನ ಕಾಲದಲ್ಲಿ ಮಾನವನು ಬೆಟ್ಟ-ಗುಡ್ಡಗಳಲ್ಲಿ ವಾಸಿಸಲು ಹಲವು ಕಾರಣಗಳಿವೆ. ನೈಸರ್ಗಿಕ ಸಂಪನ್ಮೂಲಗಳು ಅಧಿಕವಾಗಿ ಹಾಗೂ ಉಚಿತವಾಗಿ ದೊರೆಯಲ್ಪಡುವುದಲ್ಲದೆ, ಸಮುದ್ರ ಮಟ್ಟಕ್ಕಿಂತ ಹೆಚ್ಚು ಎತ್ತರವಾದ ಭೂಪ್ರದೇಶಗಳಲ್ಲಿ ಉಷ್ಣತೆ ಕಡಿಮೆಯಾಗಿ ಹವೆ ತಂಪಾಗಿರುತ್ತದೆ. ಅಲ್ಲದೆ ಶತೃಗಳು ಪ್ರವೇಶ ಮಾಡದೆ ಹಾಗೇ ರಕ್ಷಿಸಿಕೊಳ್ಳಲು ಪ್ರಕೃತಿ ನಿರ್ಮಿತ ನೆಲೆಗಳಾಗಿರುತ್ತವೆ.

ಹೀಗೆ ಪ್ರಾಕೃತಿಕವಾಗಿ ತನ್ನದೆಯಾದ ಅಲ್ಲಲ್ಲಿ ಚದುರಿದ ಕಣಶಿಲೆ, ಬೆಟ್ಟಶ್ರೇಣಿಗಳನ್ನು ಈ ಪ್ರದೇಶದಲ್ಲಿ ನಾವು ಕಾಣಬಹುದು. ಅಂತಹ ಪ್ರಮುಖ ಬೆಟ್ಟಗಳೆಂದರೆ ನನ್ನಿವಾಳದ ಏಕಶಿಲಾ ಬೆಟ್ಟ, ವರವಿನಬೆಟ್ಟ, ರಾಮದುರ್ಗದ ಹೊಸಗುಡ್ಡ, ಖುಧಾಪುರ ಫಾರಂನಲ್ಲಿ ನಿರ್ಮಿತವಾದ ಸಣ್ಣ ಪ್ರಮಾಣದ ಗಿರಿ ಕಂದರಗಳು ಪ್ರಮುಖವಾದವು.

**ಜಲ ಸಂಪತ್ತು ಮತ್ತು ಕಸುಬು :** ಈ ಪ್ರದೇಶವು ಕಡಿಮೆ ಸಂಪೂರ್ಣ ಮಳೆಬೀಳುವ ಪ್ರದೇಶವಾಗಿದ್ದು, ಮುಖ್ಯ ವೃತ್ತಿ ಕೃಷಿಯಾಗಿದೆ. ಕೆರೆ-ಕಟ್ಟೆಗಳು, ತೆರೆದ ಬಾವಿಗಳು, ಕೊಳವೆ ಬಾವಿಗಳು, ಹಳ್ಳ-ಕೊಳ್ಳಗಳು, ಜಲ ಸಂಪನ್ಮೂಲ ಮೂಲಗಳಾಗಿವೆ. ಅಂತಹ ಪ್ರಮುಖ ಕೆರೆಗಳೆಂದರೆ ಹಟ್ಟಿ ದೊರೆಗಳು ಮತ್ತು ಪವಾಡ ಪುರುಷ ತಿಪ್ಪೇಸ್ವಾಮಿಯ ಕಾಲಾವಧಿಯಲ್ಲಿ ನಿರ್ಮಿತವಾದ ದೊಡ್ಡಕೆರೆ, ಚಿಕ್ಕಕೆರೆ, ರಾಮಸಾಗರ, ಭೀಮನಕೆರೆ ಹಾಗೂ ಕೆಲವು ದಶಕಗಳ ಹಿಂದೆ ನಿರ್ಮಿತವಾದ ಖುಧಾಪುರ ಕೆರೆ, ಮನಮೈಯನಹಟ್ಟಿ ಕೆರೆ, ಮಲ್ಲೂರಹಳ್ಳಿ ಕೆರೆ, ಕೊಲಮ್ಮನಹಳ್ಳಿ ಕೆರೆ, ಓಬಯನಹಟ್ಟಿ

ಕೆರೆ ಮೊದಲಾದವು ಪ್ರಮುಖ ಹಳ್ಳಗಳೆಂದರೆ ಹಿರೆಹಳ್ಳ, ಚೌಡಮ್ಮನಹಳ್ಳ, ಮಠದಹಳ್ಳ, ಬಸವನಹಳ್ಳ, ಮಾರಮ್ಮನಹಳ್ಳ, ಸಿದ್ಲಹಳ್ಳ ಮೊದಲಾದವು. ಕೃಷಿ ಪ್ರಮುಖ ವೃತ್ತಿಯಾಗಿದ್ದರೂ ಸಹ ಬುಡಕಟ್ಟಿನ ಮೂಲ ವೃತ್ತಿಗಳಾದ ಪಶು, ಕುರಿ ಸಾಗಾಣಿಕೆ ಮಾಡುವರು. ಜೊತೆಗೆ ಹೈನುಗಾರಿಕೆ, ಕೋಳಿ ಸಾಕಾಣಿಕೆ (ಕುಕ್ಕೊಟೊದ್ಯಮ), ಇಟ್ಟಿಗೆಭಟ್ಟಿ ತಯಾರಿಕೆ ಇವು ಉಪಕಸುಬುಗಳಾಗಿವೆ.

**ಪ್ರಮುಖ ಬೆಳೆಗಳು** : ನೆಲಗಡಲೆ (ಪ್ರಮುಖ ವಾಣಿಜ್ಯ ಬೆಳೆ), ರಾಗಿ, ಸಜ್ಜೆ, ನವಣಿ, ಸಾಸಿವೆ, ತೊಗರಿ, ಕಡಲೆ ದ್ವಿದಳ ಧಾನ್ಯಗಳು.

**ನೀರಾವರಿ ಬೆಳೆಗಳು** : ಈರುಳ್ಳಿ (ಉಳ್ಳಗಡ್ಡಿ), ಜೋಳ, ಭತ್ತ, ಮೆಕ್ಕೆ ಜೋಳ, ರಾಗಿ, ಶೇಂಗಾ ಮೊದಲಾದ ಬೆಳೆಗಳನ್ನು ಬೆಳೆಯುತ್ತಾರೆ.

ತೋಟಗಾರಿಕೆ ಬೆಳೆಗಳು : ಅಡಿಕೆ, ದಾಳಿಂಬೆ, ತೆಂಗು, ವೀಳ್ಯದೆಲೆ, ಸಪೋಟ, ಹೂವಿನ ಬೆಳೆಗಳು, ತರಕಾರಿ ಬೆಳೆಗಳು ಹೀಗೆ ನೀರಾವರಿ ಜಲಮೂಲಗಳ ಮೂಲಕ ರೈತರ ಕೃಷಿ ಬದುಕಿನಲ್ಲಿ ಬದಲಾವಣೆಯ ಚಿತ್ರಣ ಕಂಡುಬರುತ್ತದೆ.

**ಖನಿಜ ಸಂಪತ್ತು** : ಒಂದು ರಾಷ್ಟ್ರದ ಸಮೃದ್ಧಿಯನ್ನು, ಅದರ ಆರ್ಥಿಕತೆ ಸಂಕೇತಿಸುವುದು, ಅದು ಹೊಂದಿರುವ ನೈಸರ್ಗಿಕ ಸಂಪನ್ಮೂಲಗಳಿಂದ ಎಂದು ಹೇಳಬಹುದು. ಆದರೆ ಈ ಪರಿಸರದಲ್ಲಿ ಅಂತಹ ಹೇಳಿಕೊಳ್ಳುವಂತಹ ಖನಿಜಗಳು ದೊರೆಯುತ್ತಿಲ್ಲ. ಆದರೆ ಕಣ ಶಿಲೆಗಳಿಂದ ಅಲ್ಲಲ್ಲಿ ಕಲ್ಲು ಗಣಿಗಾರಿಕೆಯನ್ನು ಕಾಣಬಹುದು. ಹಾಗೆಯೇ ಗೌಡಗೆರೆ, ಚನ್ನಬಸಯ್ಯನಹಟ್ಟಿ, ರಾಮದುರ್ಗ, ದೊಡ್ಡಕೆರೆ ಹಿಂಭಾಗದ ಕೆಲವು ಪ್ರದೇಶ, ಜೋಗಿಹಟ್ಟಿ, ಮಲ್ಲೂರುಹಟ್ಟಿ, ಜಾಗನೂರಹಟ್ಟಿ, ಮನಮೈಯನಹಟ್ಟಿಗಳಲ್ಲಿ ಸುಣ್ಣದ ನೀಕ್ಷೆಪಗಳಿದ್ದು, ಈ ಕಚ್ಚಾ ಸುಣ್ಣವನ್ನು ಸಂಸ್ಕರಿಸಿ ಬೇರೆ ಬೇರೆ ಗ್ರಾಮಗಳಿಗೆ ಹಾಗೂ ಹತ್ತಿರದ ಅಥವಾ ಸಮೀಪದ ನಗರಗಳಿಗೆ ಸಾಗಿಸಿ ಮಾರಾಟ ಮಾಡಲಾಗುತ್ತದೆ. ಹೀಗೆ ನಾಯಕನಹಟ್ಟಿಯು ತನ್ನದೆಯಾದ ಭೌಗೋಳಿಕ ಲಕ್ಷಣಗಳನ್ನು ಹೊಂದಿರುವುದನ್ನು ಅವುಗಳ ವೈಶಿಷ್ಟ್ಯತೆಯನ್ನು ಕಾಣಬಹುದು.

## ೨.೨. ನಾಯಕನಹಟ್ಟಿಯ ಚಾರಿತ್ರಿಕ ಹಿನ್ನೆಲೆ :

"ವಿಜಯನಗರೋತ್ತರ ಕಾಲಾವಧಿಯಲ್ಲಿ ಅಂದರೆ ಕ್ರಿ.ಶ. ೧೫೬೫-೧೮೦೦ರಲ್ಲಿ ಆದ ಬದಲಾದ ರಾಜಕೀಯ ಸನ್ನಿವೇಶದಲ್ಲಿ ಹಲವಾರು ಸಣ್ಣಪುಟ್ಟ ಪಾಳೆಗಾರರು ಸ್ವತಂತ್ರ್ಯಗೊಂಡು ತಮ್ಮ ಆಳ್ವಿಕೆ ಮಾಡತೊಡಗಿದರು. ಅಂತಹ ಪಾಳೆಗಾರರಲ್ಲಿ ನಾಯಕನಹಟ್ಟಿ ಪಾಳೆಗಾರರ ಮನೆತನ ಒಂದಾಗಿದೆ."[೩]

ಹೀಗೆ ಮೊಳಕಾಲ್ಮೂರು, ಚಳ್ಳಕೆರೆ ತಾಲೂಕುಗಳಲ್ಲಿ ಆಳ್ವಿಕೆ ನಡೆಸಿದ 'ಹಟ್ಟಿ' ಪಾಳೆಗಾರರು ತಮ್ಮ ಆಡಳಿತಾವಧಿಯಲ್ಲಿ ನಾಯಕನಹಟ್ಟಿಯನ್ನು ತಮ್ಮ ಆಡಳಿತ ಕೇಂದ್ರವನ್ನಾಗಿ ಆಳಿದರು.

ಇವರ ಬಗ್ಗೆ ತಿಳಿಯಲು ಪ್ರಮುಖ ಆಧಾರಗಳೆಂದರೆ ನಾಯಕನಹಟ್ಟಿ ದೊರೆಗಳ ವಂಶಾವಳಿ. ತಾಮ್ರಶಾಸನ, ಗೌಡಗೆರೆ ಶಾಸನ, ದೇವಾಲಯಗಳು, ವಾಸ್ತುಶಿಲ್ಪ, ಕೆರೆ-ಕಟ್ಟೆಗಳು, ಮೌಖಿಕ ಸಾಹಿತ್ಯ, ತಿಪ್ಪೇಸ್ವಾಮಿಯ 'ಪಲ್ಲಕ್ಕಿ ತಾರಾವಳಿ ಐತಿಹ್ಯ' ಮೊದಲಾದವು ಲಭ್ಯವಿವೆ.

**ಹಟ್ಟಿ ಅರ್ಥ ಮತ್ತು ಸ್ಥಾಪನೆ :** "ಸೂರ್ಯದೇವ ಪಾಪನಾಯಕನ ಮಗ. ಕಾಕಳನಾಯಕ ಎಂಬುವವನು ಗೋಸಿಕೆರೆಯಿಂದ ತನ್ನ ಕಂಪಳವನ್ನು ೧೨ ಪೆಟ್ಟಿಗೆ ದೇವರುಗಳೊಂದಿಗೆ ಈಗಿನ ನಾಯಕನಹಟ್ಟಿ ಇರುವ ಜಾಗಕ್ಕೆ ತಂದು ನೆಲೆ ನಿಲ್ಲುತ್ತಾನೆ."[೪] ಹೀಗಾಗಿ ಈ ಸ್ಥಳದಲ್ಲಿ ನೆಲೆನಿಂತ 'ನಾಯಕ' ತನ್ನ ದನಕರುಗಳಿಗೆ 'ಹಟ್ಟಿ' ಇಟ್ಟು ಸುತ್ತಲು ಗಿಡ-ಗಂಟೆ ವನಾಂತ್ರ ಕಡಿದು ನೆಲೆಸಿದ್ದರಿಂದ ಇದು ನಾಯಕನಹಟ್ಟಿಯಾಯಿತು. ಹೀಗಾಗಿ ಕಾಕಳನಾಯಕ ಇವರ ಮೂಲ ಪುರುಷನೆಂದು ಹೇಳಲಾಗಿದೆ. ಈ ಮುಂಚೆ ಈ ಸ್ಥಳವನ್ನು ಬೂದಿಹಳ್ಳಿ, ಬುದ್ಯಾಳು, ಚಂದ್ರಗಿರಿ, ಭಾನುಕೋಟೆಯೆಂದು ಕರೆಯುತ್ತಿದ್ದರು. ನಾಯಕನಹಟ್ಟಿಯ ಪಾಳೆಗಾರರು ನೆಲೆನಿಂತು ಆಳ್ವಿಕೆ ಮಾಡಿದ್ದರ ಪರಿಣಾಮವಾಗಿ ಮುಂದೆ 'ನಾಯಕನಹಟ್ಟಿ' ಎಂಬ ಹೆಸರು ಖಾಯಂ ಆಗಿ ಉಳಿಯಿತು.

ಹೀಗೆ ನಾಯಕನಹಟ್ಟಿ ತಾಮ್ರಶಾಸನ ಪ್ರಕಾರ ಕ್ರಿ.ಶ. ೧೬೫೪ರಲ್ಲಿ ವಿಜಯನಗರದ ಅರಸರ ಮೊಹರನ್ನು ಒಳಗೊಂಡಿರುವ ಈ ಶಾಸನ ಕೊದಂಡರಾಜು, ರಾಮರಾಯ, ತಿರುಮಲರಾಜು ಇವರುಗಳು ದೊಡ್ಡಮಲ್ಲಪ್ಪ ನಾಯಕನಿಗೆ ಕಮಲಾಪುರದ ಸುತ್ತಮುತ್ತಲಿನ ಹಳ್ಳಿಗಳ ಉಂಬಳಿಯ ಬಗ್ಗೆ ತಿಳಿಸುತ್ತದೆ.

ಹೀಗೆ ವಿಜಯನಗರ ಅರಸರು ಸಾಮಂತರಾಗಿ ಆಳ್ವಿಕೆ ಮಾಡಿದ ಹಟ್ಟಿ ಪಾಳೆಗಾರರ ಪ್ರಮುಖ ದೊರೆಗಳೆಂದರೆ ಮಲ್ಲಯ್ಯನಾಯಕ, ಕಾಕಾಳನಾಯಕ, ದೊಡ್ಡೆರ್ರಪ್ಪಾನಾಯಕ, ಗಿಡ್ಡರ್ರಪ್ಪಾನಾಯಕ, ದೊಡ್ಡಮಲ್ಲಪ್ಪನಾಯಕ, ಜೋಡಿಮಲ್ಲಪ್ಪನಾಯಕ, ಬಂಗಾರಮಲ್ಲಪ್ಪನಾಯಕ ಕ್ರಿ.ಶ. ೧೬೭೯ರಲ್ಲಿ ದೊಡ್ಡಮದಕರಿನಾಯಕನೊಂದಿಗೆ ಕಲ್ಲಿಕೋಟೆಯ ಯುದ್ಧದಲ್ಲಿ ಅಸುನೀಗಿದನು. ಹೀಗೆ ೧೪ನೇ ಶತಮಾನದಿಂದ ೧೮ನೇ ಶತಮಾನದವರೆಗೂ ಆಳ್ವಿಕೆ ನಡೆಸಿದ ಈ ಮನೆತನ ನಂತರ ಅವನತಿ ಹೊಂದಿತು.

ಈ ದೊರೆಗಳಲ್ಲಿ ಪ್ರಸಿದ್ಧನಾದವನೆಂದರೆ ಜೋಡಿಮಲ್ಲಪ್ಪನಾಯಕ. ಇವನ ಆಳ್ವಿಕೆ ಅವಧಿಯಲ್ಲಾದ ಕಾರ್ಯಗಳ ಬಗ್ಗೆ ಈಗಲೂ ಮೆಚ್ಚುವಂತಹದ್ದು. ಇವನ ಕಾಲಾವಧಿಯಲ್ಲಿ ಜೀವಿಸಿದ್ದ ಶರಣ ಪರಂಪರೆಯ ಕಾಯಕಯೋಗಿ ಶ್ರೀ ಗುರುತಿಪ್ಪೇಸ್ವಾಮಿ ಇವನ ಆಸ್ಥಾನದಲ್ಲಿ ರಾಜಗುರುಗಳಾಗಿದ್ದರು. ಈಗಿನ ಹಿರೇಕೆರೆ, ಚಿಕ್ಕಕೆರೆ, ಹೊಸಕೆರೆ, ಭೀಮನಕೆರೆ ಮೊದಲಾದ ಏಳು ಕೆರೆಗಳನ್ನು, ರಾಮಸಾಗರ, ಕಾಶಿಪುರ, ಮಹದೇವಪುರ, ಗೌರಿಪುರ, ಗಿಡ್ಡಾಪುರ, ಮಲ್ಲಾಪುರ, ಬಸವಾಪುರ ಮೊದಲಾದ

ಏಳು ಪುರಗಳನ್ನು ಕಟ್ಟಿಸಿದನು. ಹೀಗೆ ಈ ದೊರೆಗಳ ಆಡಳಿತಾವಧಿಯಲ್ಲಿ ಕೈಗೊಂಡ ಜನಪರ ಕಾರ್ಯಗಳಿಂದ ಅವು ಶಾಶ್ವತವಾಗಿ ಜನಾಂಗದ, ರಾಷ್ಟ್ರದ ಅಭಿವೃದ್ಧಿಗೆ ಸಹಕಾರಿಯಾಗಿವೆ ಎಂದು ಹೇಳಬಹುದು.

ಅವರು ಸ್ಥಾಪಿಸಿದ ಹಲವಾರು ಕಾನೂನು, ನೀತಿ–ನಿಯಮಗಳಲ್ಲಿ ನ್ಯಾಯ ಪಂಚಾಯತಿ ಅಥವಾ 'ಕಟ್ಟೆಮನೆ' ಪದ್ಧತಿ ಪ್ರಮುಖವಾದುದು. ಇದನ್ನು ಮ್ಯಾಸಬೇಡ ಬುಡಕಟ್ಟಿನ ಪರಂಪರೆಯಲ್ಲಿ ಇಂದಿಗೂ ಆಚರಣೆಯಲ್ಲಿರುವುದನ್ನು ನಾವು ಕಾಣಬಹುದು. ಅಂತಹ ಪ್ರಮುಖ ಕಟ್ಟೆಮನೆಗಳೆಂದರೆ ನಾಯಕನಹಟ್ಟಿ, ನನ್ನಿವಾಳ, ಗೊನೂರು ಕಟ್ಟೆಮನೆಗಳು. ಇವುಗಳ ಯಜಮಾನಿಕೆಯನ್ನು ದೊರೆ ವಂಶಸ್ಥರು ನೋಡಿಕೊಳ್ಳುವರು.

ಈ ಕಟ್ಟೆಮನೆಗಳಲ್ಲಿ ತಮ್ಮ ಕುಲಸಂಬಂಧಗಳ ವಿಚಾರಗಳು, ಸಾಮಾಜಿಕ ಬಹಿಷ್ಕಾರ, ನಿಷೇಧಗಳು, ತನ್ನ ಕುಲದೇವರುಗಳ ಆರಾಧನೆ, ಮದುವೆ, ಜಾತ್ರೆ, ಹಬ್ಬ–ಹರಿದಿನ ಹಾಗೂ ಧಾರ್ಮಿಕ ವಿಧಿವಿಧಾನಗಳ ಬಗ್ಗೆ ಚರ್ಚಿಸಿ ತೀರ್ಮಾನ ತೆಗೆದುಕೊಳ್ಳುವುದನ್ನು ಇಂದಿಗೂ ನಾವು ನೋಡಬಹುದು. ಈ ತೀರ್ಪನ್ನು ಉಲ್ಲಂಘಿಸಿದವರನ್ನು ತಮ್ಮ ಕುಲದಿಂದ ಹೊರಹಾಕಲಾಗುತ್ತದೆ. ಹೀಗೆ ತಮ್ಮ ಸಂಸ್ಕೃತಿಯ ಸಂಪ್ರದಾಯಗಳು, ರೂಢಿಗಳು, ನೀತಿ–ನಿಯಮಗಳನ್ನು ಈ ಕಟ್ಟೆಮನೆಗಳು ಅಳವಡಿಸಿಕೊಳ್ಳುವುದರ ಮೂಲಕ ಅನೌಪಚಾರಿಕ ನ್ಯಾಯಾಲಗಳಾಗಿವೆ.

ಇಂದಿಗೂ ನಾಯಕನಹಟ್ಟಿ ಪರಿಸರದಲ್ಲಿ ಈ ವಂಶದ ಪೀಳಿಗೆಯನ್ನು ಒಳಗೊಂಡಿರುವ 'ದೊರೆಗಳಹಟ್ಟಿ' ಎಂಬ ಗ್ರಾಮದಲ್ಲಿ ಎಲ್ಲರ ಹೆಸರುಗಳ ಮುಂದೆ 'ನಾಯಕ' ಎಂಬುದನ್ನು ಕಡ್ಡಾಯವಾಗಿ ಇಟ್ಟುಕೊಂಡಿದ್ದಾರೆ. ಇದಕ್ಕೆ ಮೂಲ ಕಾರಣ ನಾವು ನಾಯಕನಹಟ್ಟಿಯ ಮೂಲ ವಂಶಜರೆಂದರೆ ಅವರು ಹೇಳುವರು ಇದನ್ನು ಪುಷ್ಠಿಕರಿಸುವ ದಾಖಲೆಗಳು ಮತ್ತು ಐತಿಹ್ಯಗಳು ಮೌಖಿಕ ಆಕರಗಳ ರೂಪದಲ್ಲಿ ಲಭ್ಯವಿವೆ.

ಹೀಗೆ 'ನಾಯಕನಹಟ್ಟಿ' ಎಂದು ಪ್ರಸಿದ್ಧಿಯಾಗಿರುವ ಅಂದಿನ 'ಹಟ್ಟಿ'ಯು ಇಂದು ಚಳ್ಳಕೆರೆ ತಾಲೂಕಿನ ಒಂದು ಹೋಬಳಿ ಕೇಂದ್ರವಾಗಿದ್ದು, ತನ್ನದೆ ಆದ ಬುಡಕಟ್ಟು ಸಂಸ್ಕೃತಿಯ ನೆಲೆಯ ಪ್ರತೀಕವಾಗಿ, ಶೈಕ್ಷಣಿಕವಾಗಿ, ರಾಜಕೀಯವಾಗಿ, ವ್ಯವಹಾರಿಕವಾಗಿ, ಆರ್ಥಿಕವಾಗಿ ಅಭಿವೃದ್ಧಿ ಹೊಂದುತ್ತಿರುವ ನೆಲೆಯಾಗಿದೆ. ಇದರ ಜೊತೆಗೆ ನಾವು ನಾಯಕರ ಕಾಲದ ಸಾಮಾಜಿಕ, ರಾಜಕೀಯ ಮತ್ತು ನ್ಯಾಯ ಪದ್ಧತಿಗಳನ್ನು ತಿಳಿಯಬಹುದು.

**೨.೩. ಸಾಂಸ್ಕೃತಿಕ ಹಿನ್ನೆಲೆ :**

ನಾಯಕನಹಟ್ಟಿ ಪರಿಸರವು ಸಮೃದ್ಧಿಯಾದ ಸಾಂಸ್ಕೃತಿಯ ಪರಂಪರೆಯ ತವರೂರು. ಇಲ್ಲಿ ಹಲವಾರು ಜಾತಿ, ಸಮುದಾಯಗಳು, ಧರ್ಮಗಳಾದ ಹಿಂದೂ, ಜೈನ, ಕ್ರಿಶ್ಚಿಯನ್, ವೀರಶೈವ,

ಮುಸ್ಲಿಂ ಹೀಗೆ ವಿಶ್ವವೆಲ್ಲ ಒಂದೇ ಕುಟುಂಬ ಎಂಬಂತೆ ಎಲ್ಲಾ ಧರ್ಮಗಳು ಒಂದೇ ಮರದ ಕೊಂಬೆಗಳೆಂಬಂತೆ ಸಾಮರಸ್ಯ ಅನನ್ಯತೆ ಇರುವುದನ್ನು ನಾವು ಕಾಣಬಹುದು.

ಹಿಂದೂ ಧರ್ಮದಲ್ಲಿ ಬ್ರಾಹ್ಮಣ, ಲಿಂಗಾಯತ ನಾಯಕ, ಒಕ್ಕಲಿಗ, ನೇಕಾರ, ಜೋಗಿ, ಜಂಗಮ, ಸಿದ್ಧ, ದಾಸರು, ಗೊಲ್ಲ, ಕುರುಬ, ಲಂಬಾಣಿ, ಮಾದಿಗ, ಕೊರಮ, ಕೊರಚ, ಕಂಬಾರ, ಶೆಟ್ಟಿ ಮೊದಲಾದ ಹಲವಾರು ಜಾತಿಗಳು, ಸಮುದಾಯಗಳು ವಾಸಿಸುತ್ತಿವೆ. ಇವರಲ್ಲಿ ಆಯಾ ಸಮುದಾಯಗಳಿಗೆ ಸಂಬಂಧಿಸಿದಂತೆ ತನ್ನದೆ ಆದ ಒಂದೊಂದು ಸಂಸ್ಕೃತಿ, ಜೀವನ ವಿಧಾನ ಪರಂಪರೆಯು ರೂಪಗೊಂಡಿದೆ. ಜಾತಿ, ಕುಲ-ಕಸುಬುಗಳ ನೆಲೆಯಲ್ಲಿ ಅವರ ಜೀವನಕ್ರಮ, ಸಂಸ್ಕೃತಿ ಲಕ್ಷಣಗಳ ಭಿನ್ನತೆ ಕಂಡುಬರುತ್ತದೆ.

ಈ ಪರಿಸರದಲ್ಲಿ ವಾಸಿಸುವ ಎಲ್ಲಾ ಸಮುದಾಯದವರು ಮುಖ್ಯವಾಗಿ ದಸರಾ, ದೀಪಾವಳಿ, ಯುಗಾದಿ, ನಾಗರಪಂಚಮಿ, ಕಾರಹುಣ್ಣಿಮೆ, ಹಟ್ಟಿ ಜಾತ್ರೆ, ಕಾರ್ತಿಕೋತ್ಸವ, ಗೌರಸಂದ್ರ ಮಾರಮ್ಮನ ಜಾತ್ರೆ, ತೆಪ್ಪೋತ್ಸವ, ಹೀರೆಕೆರೆ ಕಾವಲಿನ ಚೌಡೇಶ್ವರ ಜಾತ್ರೆ, ದಡ್ಲುಮಾರಮ್ಮನ ಜಾತ್ರೆ ಮೊದಲಾದ ಹಬ್ಬ-ಹರಿದಿನಗಳನ್ನು ಜಾತ್ರೆ-ಉತ್ಸವಗಳನ್ನು ಆಚರಣೆ ಮಾಡುವ ಅವರ ಮೂಲಕ ಧಾರ್ಮಿಕ, ಸಾಂಸ್ಕೃತಿಕ, ಭಾಷಿಕ, ಸಾಮಾಜಿಕ ಸಾಮರಸ್ಯ, ಸೌಹಾರ್ದತೆ, ಸಹಿಷ್ಣುತೆಯನ್ನು ಗುರುತಿಸಿದೆ.

ಆಯಾ ಜಾತಿ, ಸಮುದಾಯಗಳು ತನ್ನದೆ ಆದ ಕುಲಸಂಬಂಧಿ, ಕಟ್ಟೆಮನೆ ಸಂಬಂಧಿ (ಗುಡಿಕಟ್ಟು), ಪ್ರಸಿದ್ಧ ದೇವರುಗಳ ಸಂಬಂಧಿ ಭಕ್ತರಾಗಿ ಪೂಜಿಸುತ್ತಾರೆ. ಅಂದರೆ ಹಟ್ಟಿತಿಪ್ಪೇಸ್ವಾಮಿ, ವಡ್ಡನಹಳ್ಳಿ ಮಾರಮ್ಮ, ಚೌಡಮ್ಮ, ದುರುಗಮ್ಮ, ಕೊಲ್ಲಾರಮ್ಮ, ಮಾರಮ್ಮ, ಗಾದ್ರಿಪಾಲನಾಯಕ, ಬೋರೆದೇವರು, ಬೋಮ್ಮದೇವರು, ಜಗಲೂರು ಪಾಪನಾಯಕ, ಬಂಗಾರುದೇವರು, ಓಬಳದೇವರು, ಈಶ್ವರ, ವಿಷ್ಣು, ಗಣೇಶ, ಹನುಮಂತ, ಬಸವಣ್ಣ, ಶನಿಮಹಾತ್ಮ, ಲಕ್ಷ್ಮೀ, ಪಾರ್ವತಿ, ಸರಸ್ವತಿ ಮೊದಲಾದ ದೈವಗಳ ಆರಾಧಕರಾಗಿದ್ದಾರೆ.

ಈ ಪರಿಸರದಲ್ಲಿ ಅನೇಕ ದೇವಾಲಯಗಳು, ಸಾಂಸ್ಕೃತಿಕ ವೀರರು, ಐತಿಹಾಸಿಕ ಪುರುಷರು, ಅವಧೂತರು ಬದುಕಿ ಬಾಳಿದ ಪುಣ್ಯಕ್ಷೇತ್ರಗಳನ್ನು ಕಾಣಬಹುದು. ಇಲ್ಲಿ ಪ್ರತಿಯೊಂದು ಗ್ರಾಮಗಳಲ್ಲಿ ತಮ್ಮ ಕುಲದೇವರುಗಳ ಕುರಿತು ಸಾಂಸ್ಕೃತಿಕ ನಾಯಕರ ಕುರಿತು, ಆರಾಧ್ಯ ದೈವಗಳ ಕುರಿತು ಕಾವ್ಯಗಳು, ಕಥನಗೀತೆಗಳು, ಲಾವಣಿಗಳು, ಕಥೆಗಳು ಹೇಳುವ ವೃತ್ತಿ-ಅರೆವೃತ್ತಿಗಾಯಕರು ನಮ್ಮ ಸಂಸ್ಕೃತಿಯ ಪ್ರಚಾರಕರಾಗಿ, ರಾಯಭಾರಿಗಳಾಗಿ, ರಕ್ಷಕರಾಗಿ ಕಾರ್ಯನಿರ್ವಹಿಸುತ್ತಾ ಹೀಗೆ ಈ ಪರಿಸರ ಪಾರಂಪರಿಕ, ಮೌಖಿಕಪರಂಪರೆ, ಸಂಸ್ಕೃತಿ, ಜನಪದ ಸಾಹಿತ್ಯ, ಕಲೆ ಉಳಿಸಿಕೊಂಡು ಬಂದಿರುವುದನ್ನು ಕಾಣಬಹುದು.

## ಕೊನೆಯ ಟಿಪ್ಪಣಿಗಳು

೧. ವೇದಮೂರ್ತಿ ಪಿ. ಪಾಲಯ, ಚಳ್ಳಕೆರೆ ತಾಲೂಕಿನ ಪರಿಸರದ ಸಾಂಸ್ಕೃತಿಕ ಅಧ್ಯಯನ–ಪು–೧೧

೨. ಅದೇ ಪು–೧೨

೩. ಡಾ. ಗೋಪಾಲ್ (ಸಂ), ಚಿತ್ರದುರ್ಗ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ–ಪು–೧೩೬

೪. ಅದೇ ಪು–೧೪೨

# ಅಧ್ಯಾಯ – ಮೂರು

# ಮೌಖಿಕ ಸಾಹಿತ್ಯದಲ್ಲಿ ವೃತ್ತಿಗಾಯಕರು

೩.೧. ವೃತ್ತಿ ಗಾಯಕರ ಹಿನ್ನೆಲೆ
೩.೨. ನಾಯಕನಹಟ್ಟಿ ಪರಿಸರದ ವೃತ್ತಿಗಾಯಕರು
೩.೩. ಚೌಡಿಕೆಯವರು
೩.೪. ಕಿನ್ನರಿ ಜೋಗಿಗಳು
೩.೫. ದೊಂಬಿದಾಸರು
೩.೬. ಸುಡಗಾಡುಸಿದ್ಧರು

# ಅಧ್ಯಾಯ – ೩
# ಮೌಖಿಕ ಸಾಹಿತ್ಯದಲ್ಲಿ ವೃತ್ತಿಗಾಯಕರು

## ೩.೧. ವೃತ್ತಿಗಾಯಕರ ಹಿನ್ನೆಲೆ :

ಆದಿಮಾನವನು ಸಂಘಜೀವಿಯಾಗಿ, ಸಮಾಜ ಜೀವಿಯಾಗಿ ಒಂದುಕಡೆ ನೆಲೆನಿಂತು ವಾಸಿಸತೊಡಗಿದ ನಂತರ ಸಾಮುದಾಯಿಕ ಪ್ರಜ್ಞೆ ಮೂಡಿ ತನ್ನದೆಯಾದ ಸಂಸ್ಕೃತಿಯನ್ನು ಅನುಸರಿಸಿಕೊಂಡು ಬಂದನು. ಈ ಸಮಯದಲ್ಲಿ ತನ್ನ ಜೀವನ ನಿರ್ವಹಣೆಯ ಅನಿವಾರ್ಯತೆಗೆ ಒಂದು ವೃತ್ತಿಯನ್ನು ಕೈಗೊಳ್ಳುವುದರ ಮೂಲಕ ಶ್ರಮ ವಿಭಜನೆಗೆ ನಾಂದಿ ಹಾಡಿದನು. ಅನಂತರ ತಮ್ಮ ಶ್ರಮದ ದಣಿವಿ ನಿವಾರಣೆಗಾಗಿ, ವಿಶ್ರಾಂತಿಗಾಗಿ, ತಮ್ಮ ಬದುಕಿನ ನೋವು–ನಲಿವುಗಳನ್ನು, ಕಷ್ಟ–ಸುಖಗಳನ್ನು, ಹರ್ಷಗಳನ್ನು ಪರಸ್ಪರ ಹಂಚಿಕೊಳ್ಳಲು ಹಾಡುವುದನ್ನು ಕಂಡುಕೊಂಡನು. ಆಡುಮಾತಿನ ಮೂಲಕ ಹೊರಹೊಮ್ಮುವ ಶಾಬ್ಧಿಕ ರೂಪಕ್ಕೆ ಮೌಖಿಕ ಸಾಹಿತ್ಯ ಎಂದು ಗುರುತಿಸಲಾಗಿದೆ.

ಹೀಗೆ ತಮ್ಮ ಬಾಯಿಮಾತಿನ ಮೂಲಕ ಹೊರಡುವ ಶಬ್ಧಗಳ ರೂಪಕ್ಕೆ ಒಂದು ರಾಗಗಳು, ಲಯ, ತಾಳ, ಸಂಗೀತ, ನೃತ್ಯ, ಸಂಯೋಜಿಸಿ ಮಾನಸಿಕ, ದೈಹಿಕ ಆಯಾಸನ್ನು ನಿವಾರಿಸಿಕೊಳ್ಳಲು ಹಾಡತೊಡಗಿದರು. ಮುಂದೆ ಜಾತ್ರೆ, ಹಬ್ಬ–ಹರಿದಿನ, ಮದುವೆ, ಉತ್ಸವಗಳಲ್ಲಿ ವೃತ್ತಿ ಕಲಾವಿದರನ್ನು ಆಹ್ವಾನಿಸಿ ಅವರಿಂದ ಕಥಾಮೇಳಗಳನ್ನು ಏರ್ಪಡಿಸುತ್ತಿದ್ದರು. ಅದಕ್ಕೆ ಪ್ರತಿಫಲವಾಗಿ ದವಸ–ಧಾನ್ಯ, ಹಣ, ಉಡುಗೊರೆಗಳನ್ನು ಕೊಟ್ಟು ಪ್ರೋತ್ಸಾಹಿಸುತ್ತಿದ್ದರು. ಅವರು ಅಭಿನಯಿಸುವುದು, ಹಾಡುವುದನ್ನು ಕಾಲಕ್ರಮೇಣ ಒಂದು ವೃತ್ತಿಯನ್ನಾಗಿಸಿಕೊಂಡು ಜೀವಿಸತೊಡಗಿದರು. ಹೀಗೆ ಅವರ ವೃತ್ತಿ ಉಗಮವಾಯಿತೆಂದು ಹೇಳಬಹುದು. ಮುಂದೆ ಅವರು ಆಚರಿಸುವ, ಅನುಸರಿಸುವ ನಂಬಿಕೆಗಳು ಆಚಾರ–ವಿಚಾರಗಳು, ದೈವದ ಆರಾಧನೆ, ವೇಷಭೂಷಣಗಳ ಹಿನ್ನೆಲೆಯಲ್ಲಿ ಬೇರೆ ಬೇರೆ ವೃತ್ತಿಗಾಯಕ ಸಮುದಾಯಗಳು ಕಂಡುಬಂದವು.

**ವೃತ್ತಿಗಾಯಕರ ಅರ್ಥ :**

'ವೃತ್ತಿ' ಎನ್ನುವ ಪದವು ಕೆಲಸ, ಕಾರ್ಯ, ದುಡಿಮೆ ಎಂಬ ಅರ್ಥ[೧]ವನ್ನು ಸೂಚಿಸುತ್ತದೆ. 'ಗಾಯನ' ಎಂದರೆ ಹಾಡುವುದು, ಸ್ತುತಿಸುವುದು, ಹೇಳುವುದು ಎಂಬ ಅರ್ಥವನ್ನು ಗುರುತಿಸಬಹುದು. ವೃತ್ತಿಗಾಯಕರೆಂದರೆ ಜೀವನೋಪಾಯಕ್ಕಾಗಿ ಹಾಡುವುದನ್ನು ಮೂಲ ವೃತ್ತಿಯನ್ನಾಗಿ ಮಾಡಿಕೊಂಡು ಜೀವಿಸುವ ಕಥೋಪಜೀವಿಗಳು.

"ಇವರು ಜನಪದ ಕಾವ್ಯಗಳನ್ನು ಹಾಡುವುದು ಒಂದು ವಿಶೇಷ ಹವ್ಯಾಸವನ್ನಾಗಿ ಬೆಳಸಿಕೊಂಡ ಒಂದು ಕಾಯಕ ವರ್ಗವನ್ನು ಎಲ್ಲಾ ಸಂಸ್ಕೃತಿಗಳಲ್ಲಿ ಕಾಣಬಹುದು. ಇದು ಅವರ ಪಾಲಿಗೆ ಜೀವನೋಪಾಯದ ಒಂದು ಮಾರ್ಗವು ಆಗಬಹುದು. ಇವರು ಹಾಡುವ ಕಾವ್ಯಗಳಿಂದ ಸಂತೃಪ್ತಿಗೊಂಡು ಅವರಿಗೆ ಸೂಕ್ತ ಉಡುಗೊರೆಗಳು, ದವಸ-ಧಾನ್ಯಗಳು ನೀಡುತ್ತಾ ಪರಸ್ಪರ ವಿನಿಮಯ ದೃಷ್ಟಿ ವೃತ್ತಿಗಾಯಕ ಪರಂಪರೆಗೆ ಮೂಲವಾಗಿ ಪರಿಗಣಿಸಿದೆ.[೨] ಎಂದು ಜೀ.ಶಂ.ಪ. ಅವರ ಹೇಳಿಕೆಯಲ್ಲಿ ವೃತ್ತಿಗಾಯಕರ ಹಿನ್ನೆಲೆಯನ್ನು ಕಾಣಬಹುದು.

"ಪರಂಪರೆಯ ಹಾಗೂ ಅನುಭವದ ಹಿನ್ನೆಲೆಯಿಂದಲೇ ಊರಿಂದ ಊರಿಗೆ ಕಥೆ ಕಟ್ಟುತ್ತಾ ಅದನ್ನೆ ಜೀವನೋಪಾಯವನ್ನಾಗಿ ಮಾಡಿಕೊಂಡಿರುವಂಥವರು" ಎಂದು ಶ್ರೀಪಾದಶೆಟ್ಟಿಯವರು ಹೇಳಿದ್ದಾರೆ.

ಈ ಹಿನ್ನೆಲೆಯಲ್ಲಿ ಹಾಡುವುದನ್ನು ಒಂದು ವೃತ್ತಿಯನ್ನಾಗಿಸಿಕೊಂಡು ಜೀವನ ನಡೆಸುವ ವೃತ್ತಿಗಾಯಕ ಸಮುದಾಯಗಳು ಅಸ್ತಿತ್ವಕ್ಕೆ ಬಂದವು. ಇವರನ್ನು ರಚನಾತ್ಮಕ ಹಾಡುಗಳ ಹಾಡುಗಾರಿಕೆಯನ್ನು ಕಸುಬನ್ನಾಗಿಸಿಕೊಂಡಿರುವ ಕಥೋಪಜೀವಿಗಳೆಂದು ಹೇಳಬಹುದು. ತಲೆಮಾರಿನಿಂದ ತಲೆಮಾರಿಗೆ ಗುರುಮುಖೇನ ಇಲ್ಲವೆ ತಮ್ಮ ಮೌಖಿಕ ಪರಂಪರೆಯ ಮೂಲಕ ಉಳಿಸಿಕೊಂಡು ತಮ್ಮ ಪರಂಪರೆಗೆ ತಕ್ಕಂತೆ ಲಾಂಛನಗಳನ್ನು, ವೇಷಭೂಷಣಗಳನ್ನು, ವಾದ್ಯ ವಿಶೇಷಗಳನ್ನು ಧರಿಸಿ, ಬಳಸಿ ಹಾಡುತ್ತ, ಅಭಿನಯಿಸುತ್ತಾ ಜನರ ಮನಸ್ಸನ್ನು ಸೂರೆಗೊಳಿಸುವ ಕಲೆಯನ್ನು ತಮ್ಮ ಜೀವನೋಪಾಯಕ್ಕಾಗಿ ಬಳಸಿಕೊಂಡಿರುವ ಕಲಾವಿದರೇ ವೃತ್ತಿಗಾಯಕರು.

ಹಾಡುವುದನ್ನು ತಮ್ಮ ಉಪಜೀವನದ ಕಸುಬಾಗಿ ಸ್ವೀಕರಿಸಿದ ಮೇಲೆ ವೃತ್ತಿಗಾಯಕರು ಅದನ್ನು ತಮ್ಮ ಬದುಕಿಗೆ ಅಂತಿಮಗೊಳಿಸದೆ, ಹಿರಿಯರಿಂದ ಕಿರಿಯರಿಗೆ, ಗುರುವಿನಿಂದ ಶಿಷ್ಯನಿಗೆ ತಮ್ಮ ಸಂಸ್ಕೃತಿಯ ಮೂಲ ಪರಂಪರೆಯಿಂದ ಮೌಖಿಕ ಸಾಹಿತ್ಯವನ್ನು ಬಳುವಳಿಯಾಗಿ ನೀಡುತ್ತಾ ಒಂದು ಪ್ರತ್ಯೇಕ ವೃತ್ತಿಗಾಯಕ ವರ್ಗದ ಸೃಷ್ಟಿಗೆ ಕಾರಣವಾಯಿತು. ಇವರ ಬೆನ್ನೆಲುಬಾಗಿ ನಿಂತದ್ದು ದೇವರು, ಮತ, ಪಂಥ ಮತ್ತು ನಮ್ಮ ಜನಪದರು. ಇಂದು ಎಲ್ಲಾ ಸಮಾಜ, ಸಂಸ್ಕೃತಿ, ಸಮುದಾಯಗಳಲ್ಲಿ ವೃತ್ತಿಗಾಯಕರು ಕಂಡುಬರುವರು.

**ವಿಶ್ವದಾದ್ಯಂತ ವೃತ್ತಿಗಾಯಕರ ಪರಂಪರೆ :**

ವಿಶ್ವದ ಸಮಾಜ, ಧರ್ಮ, ಪಂಥ, ಸಂಸ್ಕೃತಿ, ಭಾಷೆಗಳಲ್ಲಿ ವೃತ್ತಿಗಾಯಕರ ಪರಂಪರೆಯನ್ನು ಗುರುತಿಸಬಹುದು. ಅಂತಹ ಪ್ರಮುಖ ವೃತ್ತಿಗಾಯಕ ಸಮುದಾಯಗಳನ್ನು ಇಲ್ಲಿ ಗುರುತಿಸಲಾಗಿದೆ. ಅವರೆಂದರೆ ರಷ್ಯಾದಲ್ಲಿ ಕಂಡುಬರುವ 'ಸ್ಕೊಮರಾಕ್ಸಿ', ಸ್ಪೇಯಿನ್‌ನ ಕಾಂಟಡೋರ್ಸ್, ಯುರೋಪಿನಲ್ಲಿ `Ministrel' ಎಂದು ವೃತ್ತಿಗಾಯಕರನ್ನು ಕರೆಯುತ್ತಿದ್ದರೆಂದು ಥಾಮಸ್‌ಪೆರ್ಸಿ ಮತ್ತು ಸರ್ ವಾಲ್ಟರ್ ಸ್ಕಾಟ್ ಗುರುತಿಸಿದ್ದಾರೆ. ಹಾಗೆಯೇ ಇಂಗ್ಲೆಂಡಿನ ಚಕ್ರವರ್ತಿ ಆಲ್ಫ್ರೆಡ್ ಡ್ಯಾನಿಷ್ ಸೇನೆಯ ಬಲವನ್ನರಿಯಲು ವೃತ್ತಿಗಾಯಕರ ವೇಷಭೂಷಣಗಳನ್ನು ಧರಿಸಿಕೊಂಡು ಮಾಹಿತಿ ಸಂಗ್ರಹಿಸುತ್ತಿದ್ದಾರೆಂದು ಹೇಳಲಾಗಿದೆ. ಹಾಗೆಯೇ ೧೫೭೫ರಲ್ಲಿ ಎಲಿಜೆಬತ್ ರಾಣಿ ತನ್ನ ಸತ್ಕಾರಕೂಟಕ್ಕೆ ವೃತ್ತಿಗಾಯಕನೊಬ್ಬನನ್ನು ಆಹ್ವಾನಿಸಿ ಸತ್ಕರಿಸಿದ್ದಾಳೆಂದು ಅಲ್ಲಿನ ಲೇಖಕನ ಬರವಣಿಗೆಯಿಂದ ಅಲ್ಲಿನ ಸಾಹಿತ್ಯದ ಹಿನ್ನೆಲೆಯಲ್ಲಿ ನೋಡಬಹುದು.

**ಭಾರತದಲ್ಲಿ ವೃತ್ತಿಗಾಯಕರು :**

ವೈವಿಧ್ಯತೆಯಲ್ಲಿ ಏಕತೆಯನ್ನು ಕಾಣುವ ನಮ್ಮ ದೇಶದಲ್ಲಿ ಹಲವು ಜನಾಂಗಗಳು, ಧರ್ಮಗಳು, ಸಂಸ್ಕೃತಿಗಳು ಪ್ರಾದೇಶಿಕ ಭಿನ್ನತೆಯನ್ನು ನಾವು ಕಾಣಬಹುದು. ಹಾಗೆಯೇ ಪ್ರಾದೇಶಿಕ ಭಿನ್ನತೆಯ ಮೇಲೆ ಅಲ್ಲಿನ ಭಾಷೆ, ದೈವದ, ಕುಲದ ತಳಹದಿಯ ಮೇಲೆ ಅನೇಕ ವೃತ್ತಿಗಾಯಕ ಸಮುದಾಯ ವರ್ಗದವರನ್ನು ಮತ್ತು ಪ್ರಮುಖ ವೃತ್ತಿಗಾಯಕ ವರ್ಗಗಳನ್ನು ಗುರುತಿಸಲಾಗಿದೆ. ರಾಜಸ್ಥಾನದಲ್ಲಿ 'ಭೋಪ' ಎಂಬ ವೃತ್ತಿಗಾಯಕ ವರ್ಗವಿದೆ, ಪಂಜಾಬಿನಲ್ಲಿ ಕಂಡುಬರುವ ಧಾದಿಗಳು, ಭಟ್ಟರು, ಓರಿಸ್ಸಾದಲ್ಲಿ ಯೋಗಿಗಳು, ಅಸ್ಸಾಮದಲ್ಲಿ 'ಬೈರಾಗಿ', ತಮಿಳನಾಡಿನಲ್ಲಿ 'ಬಪ್ಯಾರಿ'ಗಳು, ಆಂಧ್ರದಲ್ಲಿ ಬುರ್ರ್ರ ಕಥಾದವರು, ಬಂಗಾಳದಲ್ಲಿ ಕಟಿವಾಲರು, ವಾಚಕರು, ಬಾಲುಬ್‌ಗಳು ಹೀಗೆ ನಮ್ಮ ದೇಶದಾದ್ಯಂತ ಆಯಾ ಪ್ರಾದೇಶಿಕ ಹಿನ್ನೆಲೆಯ ದೈವ, ಮತ ಪಂಥದ ವೃತ್ತಿಗಾಯಕರು ತಮ್ಮದೆ ಆದ ವಾದ್ಯಪರಿಕರಗಳನ್ನು, ವೇಷಭೂಷಣಗಳನ್ನು ಹೊಂದಿ ಧರಿಸುವುದರ ಮೂಲಕ ತಮ್ಮ ಸಂಂಸ್ಕೃತಿಯ ಪ್ರಚಾರಕರಾಗಿ ಕೆಲಸ ಮಾಡುವರು.

**ನಮ್ಮ ರಾಜ್ಯದಲ್ಲಿ ವೃತ್ತಿಗಾಯಕರ ಪರಂಪರೆ :**

ಇದುವರೆಗೂ ನಡೆದಿರುವ ಅಧ್ಯಯಗಳನ್ನು ಗಮನಿಸಿದರೆ ನಮ್ಮ ರಾಜ್ಯವು ವೃತ್ತಿಗಾಯಕರ ತವರೂರಾಗಿದೆಯೆಂದು ಹೇಳಬಹುದು. ತಮ್ಮದೆ ಆದ ಧಾರ್ಮಿಕ ಪರಂಪರೆ, ವಾದ್ಯಪರಿಕರಗಳು, ಉಡುಗೆ-ತೊಡುಗೆಗಳ ಮೂಲಕ ಅಲಂಕಾರಗೊಂಡು ನರ್ತನ, ಸಂಗೀತ, ಹಾಡುಗಾರಿಕೆಯ ಮೂಲಕ ಸಂಸ್ಕೃತಿಯ ರಾಯಭಾರಿಗಳಾಗಿರುವ ಈ ಕಥೋಪ ಜೀವಿಗಳು ನಮ್ಮ ರಾಜ್ಯದ ಎಲ್ಲಾ ಪ್ರದೇಶಗಳಲ್ಲಿ ಕಂಡುಬರುವರು. ಹಾಗೆಯೇ ಪ್ರತಿಯೊಂದು ಹಳ್ಳಿಯಲ್ಲಿ ತನ್ನದೆಯಾದ ಧಾರ್ಮಿಕ,

ಲೌಕಿಕ ಒಕ್ಕಲಿನ ವೃತ್ತಿಗಾಯಕ ಸಮುದಾಯಗಳು ನೆಲೆಸಿವೆ. ಇಲ್ಲಿ ಕಂಡುಬಂದಿರುವ ವೃತ್ತಿಗಾಯಕರನ್ನು ಧಾರ್ಮಿಕ ವೃತ್ತಿ ಗಾಯಕರು, ಲೌಕಿಕ ವೃತ್ತಿಗಾಯಕರು, ಅರೆ ವೃತ್ತಿಗಾಯಕರು, ಹವ್ಯಾಸಿ ವೃತ್ತಿಗಾಯಕರೆಂದು ಜಾನಪದ ವಿದ್ವಾಂಸರು ಗುರುತಿಸಿದ್ದಾರೆ.

**ಧಾರ್ಮಿಕ ವೃತ್ತಿಗಾಯಕರು :**

"ತಾವು ಆರಾಧಿಸುವ ದೈವದ ಮಹಿಮೆಯನ್ನು ಪ್ರಸಾರಮಾಡಿ ಜನತೆಯಲ್ಲಿ ಶ್ರದ್ಧೆ, ಭಯ-ಭಕ್ತಿ, ನಿಷ್ಠೆಗಳನ್ನು, ತ್ಯಾಗಶೀಲತೆಗಳನ್ನು ಕಾಯ್ದುಕೊಂಡು ಬರುವರು. ತಮ್ಮ ಕ್ಷೇತ್ರಕ್ಕೆ ಸಂಬಂಧಿಸಿದ ದೇವಸ್ಥಾನ, ಮಠವೊಂದರಲ್ಲಿ ದೀಕ್ಷೆಪಡೆದು ತಮ್ಮ ಆರಾಧ್ಯದೈವ ಒಕ್ಕಲಿರುವ ಕಡೆಗಳಲ್ಲಿ ನಡೆಸುವ ಧಾರ್ಮಿಕ ಕಾರ್ಯಗಳಲ್ಲಿ ಭಾಗವಹಿಸಿ ಅದರ ನೇತೃತ್ವವಹಿಸಿ, ದೇವರ ಪ್ರತಿನಿಧಿಯಂತೆ ನಡೆಸಿಕೊಡುವವರೇ ಧಾರ್ಮಿಕ ವೃತ್ತಿಗಾಯಕರು."

ಸಂಬಂಧಿಸಿದ ಧಾರ್ಮಿಕ ಕ್ಷೇತ್ರದ ಗುರುವಿನ ಅಥವಾ ಮಠದ ಮೂಲಕ ದೀಕ್ಷೆಪಡೆದು ತಮ್ಮ ವಾದ್ಯಪರಿಕರಗಳೊಂದಿಗೆ ವಿಶೇಷ ವೇಷಭೂಷಣಗಳ ಮೂಲಕ ಪ್ರತ್ಯೇಕತೆಯನ್ನು ಗುರುತಿಸಿಕೊಂಡಿರುವರು. ತಮ್ಮ ಆರಾಧ್ಯ ದೇವರ ಮಹಿಮೆಯನ್ನು ಹಾಡಿನ ಮೂಲಕ ಹಾಡುತ್ತಾ ದವಸ, ಧಾನ್ಯಗಳು, ಉಡುಗೊರೆಗಳು ಹಣವನ್ನು ಸಮಾಜಿಕರಿಂದ ಸ್ವೀಕರಿಸಿ ಉಪಜೀವಿಸುವ ಗಾಯಕ ವರ್ಗದವರನ್ನು ಧಾರ್ಮಿಕ ವೃತ್ತಿಗಾಯಕರೆಂದು ಗುರುತಿಸಲಾಗಿದೆ.[೩]

ಉದಾ: ಚೌಡಿಕೆಯವರು, ನೀಲಗಾರರು, ಕಂಸಾಳೆಯವರು, ಗೊರವರು, ಗಣೆಯವರು, ಗೊಂದಲಿಗರು.

**ಲೌಕಿಕ ವೃತ್ತಿಗಾಯಕರು :**

ಇವರು ವಂಶಪರಂಪಾರಗತವಾಗಿ ಬಂದ ತಮ್ಮ ವಾದ್ಯಗಳ ಮೂಲಕ ಧಾರ್ಮಿಕ ಮತ್ತು ಲೌಕಿಕ ಹಾಡುಗಳನ್ನು ಹಾಡುತ್ತಾ ಯಾವುದೇ ಮಠದ ಅಥವಾ ಧಾರ್ಮಿಕ ಕ್ಷೇತ್ರದಲ್ಲಿ ದೀಕ್ಷೆ ಪಡೆಯದೇ, ಯಾವುದೇ ಧಾರ್ಮಿಕ ಕಟ್ಟಪ್ಪಣೆಗಳಿಗೆ ಒಳಗಾಗದೆ, ತಮಗೆ ಬೇಕಾದ ಕಡೆ ನಿರ್ಬಂಧಗಳಲ್ಲದೆ, ಕಾಣಿಕೆ, ಬಟ್ಟೆ-ಬರೆಗಳನ್ನು ಸ್ವೀಕರಿಸುತ್ತಾ ತಮ್ಮ ಹೊಟ್ಟೆಯನ್ನು ಹೊರೆದುಕೊಳ್ಳುವ ಗಾಯಕ ವರ್ಗದವರೆಂದು ಗುರುತಿಸಿದೆ.

ಉದಾ: ದುರುಗಮುರಗಿಯರು, ದೊಂಬಿದಾಸರು, ಕಿನ್ನರಿ ಜೋಗಿಗಳು, ಸುಡಗಾಡು ಸಿದ್ಧರು, ತಂಬೂರಿಯವರು, ಬುಡಬುಡಕಿಯವರು, ಕರಪಾಲದವರು, ಬುರ್ರಕಥಾದವರು. ಧಾರ್ಮಿಕ ಮತ್ತು ಲೌಕಿಕ ವೃತ್ತಿಗಾಯಕರಿಗೂ ಇರುವ ಪ್ರಮುಖ ವ್ಯತ್ಯಾಸ ಎಂದರೆ ಕಥೆಗಾರಿಕೆಯಲ್ಲದಿದ್ದರೂ ದೈವ ಸಂಬಂಧವಾದದ್ದು. ಧಾರ್ಮಿಕ ವೃತ್ತಿಗಾಯಕರು ತಮ್ಮ ಧಾರ್ಮಿಕ ಕ್ಷೇತ್ರದಲ್ಲೂ ನಡೆಯುವ ಮತ್ತು

ತಮ್ಮ ಒಕ್ಕಲಿರುವ ಕಡೆ ನಡೆಯುವ ಜಾತ್ರೆ, ಹಬ್ಬ-ಹರಿದಿನಗಳು, ಹುಣ್ಣಿಮೆ, ಅಮವಾಸೆ ಸಂದರ್ಭದಲ್ಲಿನ ಧಾರ್ಮಿಕಾಚರಣೆಗಳಲ್ಲಿ ಭಾಗವಹಿಸುವುದಲ್ಲದೆ, ಆಚರಣೆಗಳಲ್ಲಿ ಪ್ರಮುಖ ಸ್ಥಾನಮಾನಗಳನ್ನು ಪಡೆದಿರುತ್ತಾರೆ. ತಾವು ನಡೆದುಕೊಳ್ಳುವ ಕ್ಷೇತ್ರಕ್ಕೆ ನಿಗದಿತ ಕಾಣಿಕೆ, ಮುಡುಪು, ಹರಕೆ ಒಪ್ಪಿಸುತ್ತಾ ನಿಯತಕಾಲದಲ್ಲಿ ತಮ್ಮ ದೈವದ ಕಥೆಗಳನ್ನು ಹಾಡುತ್ತಾರೆ. ಕೆಲವೊಮ್ಮೆ ಗೊತ್ತಾದ ದಿನಗಳಲ್ಲಿ (ಎಲ್ಲಮ್ಮನ ವಾರ ಮಂಗಳವಾರ, ಶುಕ್ರವಾರ) ದೇವರ ಹೆಸರಿನಲ್ಲಿ ಭಿಕ್ಷಾಟನೆ ನಡೆಸುತ್ತಾರೆ. ತಮ್ಮ ವಾದ್ಯಗಳನ್ನು ದೈವದ ಪ್ರತೀಕವೆಂದು ಭಾವಿಸಿ ಪೂಜಿಸುವ ಇವರು ತಮ್ಮ ದೈವದ ಒಕ್ಕಲುಗಳು ನೆಲೆಸಿರುವ ಪ್ರದೇಶದಲ್ಲಿ ಮಾತ್ರ ಭಾಗವಹಿಸಿ, ದೇವರ ಬಿರುದು, ಬಾವಲಿಗಳನ್ನು ತಪ್ಪದೆ ಧರಿಸುತ್ತಾರೆ.

ಆದರೆ ಲೌಕಿಕ ಸಂಪ್ರದಾಯದ ವೃತ್ತಿಗಾಯಕರಿಗೆ ಯಾವುದೇ ನಿರ್ಬಂಧಗಳಿರುವುದಿಲ್ಲ. ಆದರೆ ಪರಂಪರೆಯಿಂದ ಬಂದ ವಾದ್ಯಗಳನ್ನು ಹಿಡಿದು ಕಥಾಮೇಳಗಳನ್ನು ನಡೆಸುತ್ತಾರೆ. ಉಡುಗೊರೆಗಳನ್ನು ಸ್ವೀಕರಿಸುತ್ತಾರೆ. ಹಬ್ಬ-ಹರಿದಿನ, ಜಾತ್ರೆ, ಉತ್ಸವಗಳಲ್ಲಿ ಕಥಾಮೇಳ ನಡೆಸುವ ಅವಕಾಶ ಇಂದಿಗೂ ಇವರಿಗಿರುವುದನ್ನು ಕಾಣಬಹುದು. ತಮ್ಮ ಜೀವನೋಪಾಯಕ್ಕಾಗಿ ಕಥನ ಕಾವ್ಯಗಳನ್ನು ಕಲಿತು ಕಥೆ ಹೇಳುತ್ತಾರೆಯೇ ಹೊರತು ಯಾವ ದೈವ ಸಂಬಂಧವೂ ಇವರಿಗೆ ಇರುವುದಿಲ್ಲ. ಈ ಗಾಯಕರು ಆಹ್ವಾನ ದೊರೆತ ಕಡೆ ಹೋಗಿ ಮನೆಯ ಜಗಲಿಯ ಮೇಲೆ, ಊರಿನ ದ್ವಾರ ಬಾಗಿಲ ಬಳಿ, ದೇವಸ್ಥಾನದ ಪ್ರಾಂಗಣಗಳಲ್ಲಿ ಕಥೆ ಮಾಡುತ್ತಾ ಹಾಡು ಹಾಡುವರು. ಹಾಗೂ ಶ್ರೋತೃಗಳನ್ನು ಮನರಂಜಿಸುತ್ತಾ ಅವರಲ್ಲಿ ದೈವನಂಬಿಕೆ, ಶ್ರದ್ಧೆ, ನಿಷ್ಠೆ, ತ್ಯಾಗ, ಸಹಕಾರ ಗುಣಗಳನ್ನು ಮೂಡಿಸುತ್ತಾ ಅವರಿಂದ ದವಸ-ಧಾನ್ಯಗಳು, ಉಡುಗೊರೆಗಳನ್ನು ಸ್ವೀಕರಸುತ್ತಾ ಜೀವನ ನಿರ್ವಹಣೆ ಮಾಡುವುದನ್ನು ಇಂದಿಗೂ ಕಾಣಬಹುದು.

**೩.೨. ನಾಯಕನಹಟ್ಟಿ ಪರಿಸರದ ವೃತ್ತಿಗಾಯಕರು**

ನಮ್ಮ ರಾಜ್ಯದ ಮಧ್ಯಭಾಗದಲ್ಲಿ ಬರುವ ನಾಯಕನಹಟ್ಟಿಯು ಧಾರ್ಮಿಕ, ಸಾಮಾಜಿಕ ಸಾಮರಸ್ಯ ಕೇಂದ್ರ. ಇಲ್ಲಿ ವಾಸಿಸುವ ಜನರು ತಮ್ಮದೆ ಆದ ಸಂಸ್ಕೃತಿಯ ಹಿನ್ನೆಲೆಯನ್ನು ಹೊಂದಿರುವರು. ಇವರು ತಮ್ಮ ಸಂಸ್ಕೃತಿಯ ಇತಿಹಾಸ, ಸಾಂಸ್ಕೃತಿಕ ಅಂಶಗಳನ್ನು ತಿಳಿಯಬೇಕಾದರೆ ಅವರಿಗೆ ಪ್ರಮುಖ ಆಧಾರಗಳೆಂದರೆ ಪರಂಪರಾಗತವಾಗಿ ಅವರಲ್ಲಿ ಉಳಿದುಕೊಂಡಿರುವ ಪಾರಂಪರಿಕ ಜ್ಞಾನ ಪರಂಪರೆಯ ಪ್ರತಿನಿಧಿ ಮೌಖಿಕ ಸಾಹಿತ್ಯ ಎಂದು ಹೇಳಬಹುದು. ಇಂದಿಗೂ ಇಲ್ಲಿನ ಜನತೆಯ ಹಾಡುವ ಹಾಡುಗಳು, ಹೇಳುವ ಕಥೆಗಳು, ಪ್ರದರ್ಶಿಸುವ ಕಲೆಗಳಲ್ಲಿ ಇವರ ಮೌಖಿಕ ಪರಂಪರೆಯನ್ನು ಗುರುತಿಸಬಹುದು. ಇವರು ತಮ್ಮ ಬದುಕಿನ ನೋವು-ನಲಿವುಗಳು, ಸುಖ-ದುಃಖಗಳ ನಿವಾರಣೆಗಾಗಿ, ದುಡಿಮೆಯ ವಿಶ್ರಾಂತಿಗಾಗಿ ಇಂದಿಗೂ ಮೌಖಿಕ ಸಾಹಿತ್ಯದ ಪ್ರಕಾರಗಳಾದ

ಒಗಟುಗಳು, ಗಾದೆಗಳು, ಕಥೆಗಳು, ಜನಪದ ಮಹಾಕಾವ್ಯಗಳು, ಶಿಶುಪ್ರಾಸ, ಜೋಗುಳ ಹಾಡುಗಳು, ಸೋಬಾನೆ ಹಾಡುಗಳು, ರಾಮಾಯಣ, ಮಹಾಭಾರತ ಮತ್ತು ತಮ್ಮ ಸ್ಥಳೀಯ ಸಾಂಸ್ಕೃತಿಕ ವೀರರನ್ನು ಕುರಿತು ತಮ್ಮ ದೈನಂದಿನ ಬದುಕಿನಲ್ಲಿ ಜಾತ್ರೆ, ಉತ್ಸವ, ಹಬ್ಬ-ಹರಿದಿನಗಳು, ಮದುವೆ ಮೊದಲಾದ ಕಾರ್ಯಗಳ ಆಚರಣೆಯ ಸಂದರ್ಭದಲ್ಲಿ ಹಾಡುಗಳನ್ನು ಹಾಡುವರು.

ಸಾಂಸ್ಕೃತಿಕವಾಗಿ ಸಮೃದ್ಧಿಯಾದ ನಾಯಕನಹಟ್ಟಿ ವ್ಯಾಪ್ತಿಯಲ್ಲಿ ತಮ್ಮ ಜೀವನೋಪಾಯಕ್ಕಾಗಿ ಹಾಡುವುದನ್ನೇ ವೃತ್ತಿಯಾಗಿಸಿಕೊಂಡು ಅದನ್ನು ಅವಲಂಬಿಸಿ ತಮ್ಮ ಜೀವನ ನಡೆಸುವ ಹಲವಾರು ವೃತ್ತಿಗಾಯಕ ಸಮುದಾಯಗಳನ್ನು ಕಂಡುಬರುವವು. ಅಂತಹ ಪ್ರಮುಖ ವೃತ್ತಿಗಾಯಕ ಸಮುದಾಯಗಳೆಂದರೆ ಕಿನ್ನರಿ ಜೋಗಿಗಳು, ಚೌಡಿಕೆಯವರು, ದೊಂಬಿದಾಸರು, ಸುಡುಗಾಡುಸಿದ್ಧರು, ಇವರು ಮೌಖಿಕ ಸಾಹಿತ್ಯದ ವಿವಿಧ ಪ್ರಕಾರಗಳನ್ನು ತಮ್ಮ ಹಾಡುಗಳಲ್ಲಿ, ಕಥಾಮೇಳಗಳಲ್ಲಿ ಬಳಸಿಕೊಂಡು ಹಾಡುತ್ತಾ ಇಲ್ಲಿನ ಬುಡಕಟ್ಟಿನ ಸಾಂಸ್ಕೃತಿಕ ವೀರರ ಕಾವ್ಯಗಳು, ಸ್ಥಳೀಯ ದೇವರುಗಳಾದ ಮಾರಮ್ಮ, ಎಲ್ಲಮ್ಮ, ಚೌಡಮ್ಮ, ತಿಪ್ಪೇಸ್ವಾಮಿ, ಬೋರೆ ದೇವರು, ಚಿತ್ರಲಿಂಗ, ಕಾಟಲಿಂಗ, ಬೊಮ್ಮದೇವರು, ಯರಮಂಚ ನಾಯಕ, ಓಬಳದೇವರು, ಶಿವ, ಪಾರ್ವತಿ, ಹನುಮಂತ, ಕೃಷ್ಣ, ರಾಮ, ಲಕ್ಷ್ಮೀ, ವಿಷ್ಣು ಮೊದಲಾದ ದೇವರುಗಳ ಮೇಲೆ ಹಾಗೂ ತಮ್ಮ ಆರಾಧನ ದೇವರಗಳ ಕುರಿತು ಹಾಡುಗಳನ್ನು ಪರಂಪರಾಗತವಾಗಿ ಕಲಿತು ಕೆಲವುಗಳನ್ನು ತಮ್ಮ ಸ್ವರಚನೆಯಿಂದ ರಚಿಸಿ ಆ ಪ್ರದೇಶದ ಭಾಷಿಕ ಹಿನ್ನೆಲೆಯಲ್ಲಿಯೇ ತಮ್ಮ ಕಥಾಮೇಳ, ಹಾಡುಗಳನ್ನು ಹಾಡುವುದನ್ನು ನೋಡಬಹುದು. ಇಂಥ ವಿಶಿಷ್ಟ ಗಾಯಕ ವರ್ಗಗಳ ಜೀವನ ವಿಧಾನ, ರೀತಿ-ನೀತಿ, ಸಂಪ್ರದಾಯಗಳು, ಸಾಹಿತ್ಯವನ್ನು ಇಲ್ಲಿ ಸ್ಥೂಲವಾಗಿ ಅಧ್ಯಯನ ಮಾಡಿ ಚರ್ಚಿಸಿದೆ.

**೩.೩. ಚೌಡಿಕೆಯವರು :**

ನಾಯಕನಹಟ್ಟಿ ವ್ಯಾಪ್ತಿಯಲ್ಲಿರುವ ಚೌಡಿಕೆಯವರು ಮೌಖಿಕ ಪರಂಪರೆಗೆ ತಮ್ಮದೆಯಾದ ಕೊಡುಗೆ ಕೊಟ್ಟಿರುವುದನ್ನು, ಅವರ ವೃತ್ತಿಗಾಯನ ಹಿನ್ನೆಲೆಯಲ್ಲಿ ತಿಳಿಯಬಹುದು. ಇವರು ಉಚ್ಚಂಗಿ ದುರ್ಗದ ಎಲ್ಲಮ್ಮನ ಧಾರ್ಮಿಕ ಕ್ಷೇತ್ರದಿಂದ ದೀಕ್ಷೆ ಪಡೆದು, ಆ ಒಕ್ಕಲಿನವರಾಗಿ ದೇವಿಯ ಮಹಿಮೆಯನ್ನು, ತಮ್ಮ ಕಥೆಯ ಹಾಡಿನ ಮೂಲಕ ತಮ್ಮ ತಲೆಯ ಮೇಲೆ ಜಗಕೊಡ ಹೊತ್ತುಕೊಂಡು ಚೌಡಿಕೆಯನ್ನು ಹಿಡಿದು ಬಾರಿಸುತ್ತಾ ಭೀಕ್ಷಾಟನೆ ಮಾಡುತ್ತಾ ಬದುಕುವ ಇವರನ್ನು ಚೌಡಿಕೆಯವರೆಂದು ಕರೆಯುವುದು ವಾಡಿಕೆ.

**ಎಲ್ಲಮ್ಮ ಶಬ್ಧನಿಷ್ಪತ್ತಿ :**

ಆದಿಶಕ್ತಿ ಎಲ್ಲಮ್ಮನನ್ನು ರೇಣುಕಾದೇವಿ, ಆದಿಶಕ್ತಿ, ಜಗದಂಬಾ, ಎಕ್ಕಲದೇವಿ, ಉತ್ಸವಾಂಬ, ತುಳಜಾಭವಾನಿ, ಲೋಕಮಾತೆ ಎಂಬ ಹೆಸರುಗಳಿಂದ ಕರೆಯಲಾಗುತ್ತದೆ. ಆದರೆ ಇಂದು

ರೇಣುಕಾದೇವಿ, ಎಲ್ಲಮ್ಮ ಎಂಬ ಹೆಸರುಗಳು ಹೆಚ್ಚು ಪ್ರಚಲಿತದಲ್ಲಿವೆ. ಎಲ್ಲಮ್ಮ ಅಂದರೆ 'ಎಲ್ಲೆಯ ಅಮ್ಮ' ಎಲ್ಲಮ್ಮ ಎಂಬ ಅರ್ಥವನ್ನು ಸೂಚಿಸುತ್ತದೆ. ಆದಿಮ ಸಂಸ್ಕೃತಿಯಲ್ಲಿ ಮಾನವನು ತನ್ನ ರಕ್ಷಣೆಗೊಸ್ಕರ ತಮ್ಮ ಭೌಗೋಳಿಕ ಎಲ್ಲೆಯ ಅಥವಾ ಗಡಿಗೆ ಸಂಬಂಧಿಸಿದಂತೆ ಒಂದು ದೇವತೆಯನ್ನು ಸ್ಥಾಪಿಸಿಕೊಂಡು ಆರಾಧಿಸುವುದರಿಂದ ಎಲ್ಲೆಯ ಅಮ್ಮ ಎಲ್ಲಮ್ಮನಾಗಿ ಮಾರ್ಪಾಡಾಗಿದೆ ಎಂದು ಹೇಳಬಹುದು.

**ಎಲ್ಲಮ್ಮನ ಮೂಲದ ಹಿನ್ನೆಲೆ :**

ಆದಿಶಕ್ತಿ ಎಲ್ಲಮ್ಮನ ಮೂಲದ ಬಗ್ಗೆ ಜನಪದರಲ್ಲಿ ಚೌಡಿಕೆಯವರಲ್ಲಿರುವ ನಂಬಿಕೆಗಳನ್ನು ಆಧರಿಸಿ ವಿದ್ವಾಂಸರು ಪುರಾಣ ಮೂಲ ಜನಪದ ಮೂಲಗಳೆಂದು ವರ್ಗೀಕರಿಸಿ ತಮ್ಮ ಅಭಿಪ್ರಾಯಗಳನ್ನು ಹೇಳಿರುವುದನ್ನು ಇಲ್ಲಿ ಗುರುತಿಸಿದೆ.

**ಪೌರಾಣಿಕ ಹಿನ್ನೆಲೆ ಮೂಲ :**

"ವಾಯುಪುರಾಣ, ಸ್ಕಂದಪುರಾಣ, ಪದ್ಮಪುರಾಣಗಳ ಹಿನ್ನೆಲೆಯಲ್ಲಿ ರೇಣುಕಾದೇವಿ ಇಕ್ವಾಕು ವಂಶದ ರೇಣುಕಾ ರಾಜನ ಸಾಕು ಮಗಳು. ಆಕೆಗೆ ಏಕಾವೀರ ಜಗದಂಬಾ, ಆದಿಶಕ್ತಿ ಎಂಬ ಹೆಸರುಗಳಿವೆ. ಈಕೆಯನ್ನು ಭೃಗುವಂಶದ ಮಹಾಕೋಪಿಷ್ಠ, ಉಗ್ರತಪಸ್ವಿ, ಜಮದಾಗ್ನಿ ಮುನಿಗಳಿಗೆ ವಿವಾಹ ಮಾಡಿಕೊಡುತ್ತಾರೆ"[೪] ಮದುವೆಯಾದ ಮೇಲೆ ರೇಣುಕೆ ತನ್ನ ಪತಿಯೇ ಪರದೈವವೆಂದು ಪತಿಯ ಸೇವೆಯಲ್ಲಿ ನಿರತಳಾಗುತ್ತಾಳೆ. ಆದರೆ ಒಮ್ಮೆ ರೇಣುಕೆ ನದಿಗೆ ನೀರು ತರಲು ಹೋದಾಗ ಚಿತ್ರರಥನೆಂಬ ಗಂಧರ್ವನು ತನ್ನ ಮಡದಿಯೊಂದಿಗೆ ಜಲಕ್ರೀಡೆಯನ್ನು ಆಡುತ್ತಿದ್ದನ್ನು ನೋಡಿದ ರೇಣುಕಾದೇವಿ ಚಿತ್ತಚಾಂಚಲ್ಯಕ್ಕೆ ಒಳಗಾಗಿ ತನ್ನ ವ್ರತಭಂಗಕ್ಕೆ ಒಳಗಾಗಿ ಆಶ್ರಮಕ್ಕೆ ಹಿಂದುರಿದಾಗ ಆಕೆಯನ್ನು ನೋಡಿದ ಜಮದಾಗ್ನಿ ವ್ರತಭ್ರಸಳು ಮಾನಸಿಕ ವ್ಯಭಿಚಾರಿಯಾದ ಆಕೆಯನ್ನು ಕೊಲ್ಲಲು ತನ್ನ ಮಕ್ಕಳಿಗೆ ಹೇಳಿದಾಗ ಮೊದಲಿನ ನಾಲ್ಕು ಗಂಡು ಮಕ್ಕಳು ಮಾತೃ ವಾತ್ಸಲ್ಯದಿಂದ ತಂದೆಯ ಆಜ್ಞೆಯನ್ನು ತಿರಸ್ಕರಿಸಿದಾಗ ಅವರನ್ನು ಶಾಪದಿಂದ ಭಸ್ಮ ಮಾಡುತ್ತಾನೆ. ಆದರೆ ಕೊನೆಯ ಮಗ ಪರುಶರಾಮನು ತನ್ನ ಪಿತೃ ವಾಕ್ಯ ಪರಿಪಾಲಕನಾಗಿ ತನ್ನ ತಾಯಿ ರೇಣುಕೆಯನ್ನು ಕಡಿದಾಗ ಇದನ್ನು ಕಂಡ ಜಮದಗ್ನಿ ಮುನಿ ನಿನಗೆ ಏನು ವರಬೇಕು ಎಂದಾಗ ಸತ್ತ ತಾಯಿ ಸಹೋದರರನ್ನು ಬದುಕಿಸಿಕೊಡು ಎಂದಾಗ ಅದರಂತೆ ಜಮದಗ್ನಿ ಬದುಕಿಸಿಕೊಟ್ಟನು. ಹೀಗೆ ತಂದೆಯ ಅನುಗ್ರಹದಿಂದ ತಾಯಿ, ಸಹೋದರರನ್ನು ಬದುಕಿಸಿಕೊಂಡು ತಾಯಿಯ ಮಹಿಮೆಯನ್ನು ಇಡೀ ಜಗತ್ತಿಗೆ ಸಾರಿದನೆಂದು ಪೌರಾಣಿಕ ಮೂಲಗಳು ತಿಳಿಸುತ್ತವೆ. ಇಂದಿಗೂ ಚೌಡಿಕೆಯವರು ತಮ್ಮ ಕಥಾಮೇಳದ ಪ್ರದರ್ಶನದಲ್ಲಿ ಈ ಮೇಲಿನ ಪ್ರಸಂಗವನ್ನು ಕುರಿತು ಹೇಳುವುದನ್ನು ಇಲ್ಲಿ ಕಾಣಬಹುದು.

**ಜನಪದ ಮೂಲದ ಹಿನ್ನೆಲೆ :**

ಪತಿವ್ರತೆ ನಿಷ್ಠಳಾದ ರೇಣುಕಾದೇವಿ ತನ್ನ ವ್ರತಭಂಗದಿಂದ ಪತಿ ಜಮದಗ್ನಿಯ ಕೋಪದಿಂದ ಶಾಪಕ್ಕೆ ಬಲಿಯಾಗಿ ತೊನ್ನು ರೋಗವನ್ನು ವರವನ್ನಾಗಿ ಪಡೆದುಕೊಂಡು ತಿರುಗುತ್ತಿರುವಾಗ ಒಮ್ಮೆ ಎಲ್ಲಮ್ಮ ಕ್ಷೇತ್ರದ ಜೋಗುಳದ ಬಾವಿಯ ಬಳಿಗೆ ಬಂದಾಗ ಅಲ್ಲಿದ್ದ ಎಕ್ಕಯ್ಯ, ಜೋಗಯ್ಯ ಎಂಬ ಸಿದ್ಧರ ಸಲಹೆ ಮೇರೆಗೆ ಜೋಗುಳದ ಬಾವಿಯಲ್ಲಿ ಸ್ನಾನಮಾಡಿ, ಅರಿಸಿನ ಹಚ್ಚಿಕೊಂಡಾಗ ತೊನ್ನು ರೋಗ ನಿವಾರಣೆಯಾಯಿತು. ಇದರಿಂದ ಹರ್ಷಗೊಂಡ ರೇಣುಕಾದೇವಿ "ಎಕ್ಕಯ್ಯ, ಜೋಗಯ್ಯ ನಿನಾಲ್ಕ ಉಧೋ, ಉಧೋ' ಎಂದು ಅವರನ್ನು ನೆನೆಯುವುದರ ಮೂಲಕ ಅವರ ಕೃಪೆಗೆ ಪಾತ್ರಳಾದಳು.

ಇಂದಿಗೂ ಈ ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ ಆಚರಣೆಗಳನ್ನು ಜೋಗತಿಯರು ಪ್ರಮುಖ ಎಲ್ಲಮ್ಮನ ಧಾರ್ಮಿಕ ಕ್ಷೇತ್ರಗಳಲ್ಲಿ ತಮ್ಮ ಧಾರ್ಮಿಕೋತ್ಸವಾದಿಗಳಲ್ಲಿ ಆಚರಿಸುವಾಗ ಪೂಜೆ, ಪುನಸ್ಕಾರಗಳನ್ನು ಮಾಡುವುದನ್ನು ನಾವು ಕಾಣಬಹುದು.

**ಎಲ್ಲಮ್ಮದೇವಿಯ ಆಚರಣಾ ಸಮುದಾಯಗಳ ಪರಿಚಯ :**

ಎಲ್ಲಮ್ಮದೇವಿಯ ಒಕ್ಕಲಿಲ್ಲದ ಹಳ್ಳಿಗಳು ನಮ್ಮ ರಾಜ್ಯದಲ್ಲಿ ಕಡಿಮೆ ಎಂದು ಹೇಳಬಹುದು. ಎಲ್ಲಮ್ಮನ ಪ್ರಮುಖ ಧಾರ್ಮಿಕ ಕ್ಷೇತ್ರಗಳೆಂದರೆ ಸವದತ್ತಿ ಎಲ್ಲಮ್ಮ, ಚಂದ್ರಗುತ್ತಿಯ ಎಲ್ಲಮ್ಮ, ಉಚ್ಚಂಗಿ ದುರ್ಗದ ಎಲ್ಲಮ್ಮ, ನಿರಮಾನ್ವಿಯ ಎಲ್ಲಮ್ಮ, ಹುಲಗಿಯ ಹುಲಗಮ್ಮ, ಸೋಮ್ಲಾಪುರದ ಎಲ್ಲಮ್ಮ ಮೊದಲಾದವು ಹಾಗೂ ಎಲ್ಲಮ್ಮನ ಒಕ್ಕಲಿರುವ ಪ್ರತಿಯೊಂದು ಹಳ್ಳಿಯಲ್ಲಿ ದೇವಿಯ ದೇವಸ್ಥಾನ, ದೇವಿಯ ಕತೆಗಳು ಇರುವುನ್ನು ಕಾಣಬಹುದು. ಮಾತೃದೇವತಾ ಆರಾಧಕರಾದ ಕೆಳವರ್ಗದ ಜನರು ಎಲ್ಲಮ್ಮದೇವಿಯ ಪ್ರಮುಖ ಆರಾಧಕರಾಗಿದ್ದಾರೆ. ಆದರೆ ಇದಕ್ಕೆ ಅಪವಾದವೆಂಬಂತೆ ಅಲ್ಲಲ್ಲಿ ಮೇಲ್ವರ್ಗದ ಜನರು ಸಹ ದೇವಿಯ ಭಕ್ತರಾಗಿರುವುದು ಕಾಣಬಹುದು. ಹೀಗೆ ದೇವಿ ಎಲ್ಲಮ್ಮನು ಎಲ್ಲ ವರ್ಗದವರ, ಜಾತಿಯವರ ಆರಾಧಕ ಶಕ್ತಿದೇವತೆಯೆಂದು ಹೇಳಬಹುದು.

ನಾಯಕನಹಟ್ಟಿ ಪರಿಸದಲ್ಲಿ ಪ್ರಮುಖವಾಗಿ ಮ್ಯಾಸಬೇಡರು, ಆದಿ ಕರ್ನಾಟಕ, ಬೋವಿ, ಗೊಲ್ಲರು, ಕುರುಬರು, ಉಪ್ಪಾರರು, ಹೊಲೆಯರು, ಕೊರಚರು, ಲಂಬಾಣಿಗಳು ಮೊದಲಾದ ಬುಡಕಟ್ಟು ಮತ್ತು ಕೆಳವರ್ಗದ ಜನರು ದೇವಿಯ ಹೆಸರಿನಲ್ಲಿ ದೀಕ್ಷೆ ಪಡೆದುಕೊಂಡು ಆರಾಧಿಸುವುದನ್ನು ನೋಡಬಹುದು. ಇಲ್ಲಿನ ಭಕ್ತರು ದಾವಣಗೆರೆ ಜಿಲ್ಲೆಯ ಹರಪನಹಳ್ಳಿ ತಾಲೂಕಿನ ಉಚ್ಚಂಗಿದುರ್ಗದ ಎಲ್ಲಮ್ಮನ ಆರಾಧಕರಾಗಿ ಆ ಕ್ಷೇತ್ರದ ಒಕ್ಕಲಿನವರಾಗಿದ್ದಾರೆ.

**ಜೋಗತಿ ಸಂಪ್ರದಾಯ :**

ಎಲ್ಲಮ್ಮನ ಆರಾಧಕರಾದ ದೇವಿಯ ಸೇವೆಗೆ ಭಕ್ತಿಪೂರ್ವಕವಾಗಿ ತಮ್ಮನ್ನೆ ಅರ್ಪಿಸಿಕೊಂಡು ಒಂದು ಬಗೆಯ ಯೋಗಿಕ ಜೀವನವನ್ನು ನಡೆಸುವ ಆರಾಧಕರನ್ನು 'ಜೋಗಪ್ಪ, ಜೋಗತಿ' ಎಂಬ ಹೆಸರಿನಿಂದ ಕರೆಯುತ್ತಾರೆ.

ಜೋಗತಿ ಸಂಪ್ರದಾಯದಲ್ಲಿ ಮೂರು ರೀತಿಯ 'ಮುತ್ತು' ಕಟ್ಟಿಕೊಳ್ಳುವರನ್ನು ಗುರುತಿಸಲಾಗಿದೆ. ಅವರುಗಳೆಂದರೆ ೧. ಗರತಿ ಮುತ್ತು ಕಟ್ಟಿಸಿಕೊಂಡವರು ೨. ಜೋಗತಿ ಮುತ್ತು ಕಟ್ಟಿಸಿಕೊಂಡಿರುವವರು ೩. ಸೂಳೆ ಮುತ್ತು ಕಟ್ಟಿಸಿಕೊಂಡಿರುವರು ಇವರನ್ನು ಅವರು ಧರಿಸಿದ ವೇಷಭೂಷಣಗಳಿಂದ ಗುರುತಿಸಬಹುದು. ಈ ೩ ವರ್ಗದ ಜೋಗತಿ ಸಂಪ್ರದಾಯದವರ ಬಗ್ಗೆ ನಮ್ಮ ಮೌಖಿಕ ಪರಂಪರೆ, ಪುರಾಣಗಳು ಬೆಳಕು ಚೆಲ್ಲುತ್ತವೆ. ಅಂತಹ ಅಭಿಪ್ರಾಯಗಳನ್ನು ಈ ಕೆಳಕಂಡಂತೆ ಗುರುತಿಸಲಾಗಿದೆ.

**ಸ್ತ್ರೀರೂಪದಲ್ಲಿರುವ ಹೆಣ್ಣು ಜೋಗತಿಯರು :**

ಇವರ ಬಗ್ಗೆ ಇರುವ ಅಭಿಪ್ರಾಯವೆಂದರೆ "ಪತಿ ಶಾಪದಿಂದ ರೋಗಿಷ್ಟಳಾದ ಎಲ್ಲಮ್ಮ, ಊರಲ್ಲಿ ನೆಲೆ ಸಿಗದೆ ಗುಡ್ಡವನ್ನು ಆಶ್ರಯಿಸಿದಾಗ ಎಕ್ಕಯ್ಯ, ಜೋಗಯ್ಯರೆಂಬ ಸಿದ್ಧರ ದರ್ಶನದಿಂದ ರೋಗಮುಕ್ತಳಾಗಿ ಅವರಿಂದ ತನ್ನ ಸೇವೆಗೆ ದಾಸಿಯರನ್ನು ಪಡೆದುಕೊಂಡಳು" ಈ ದಾಸಿಯರ ಮೂಲದಿಂದ ಹೆಣ್ಣು ಜೋಗತಿಯರ ಸಂಪ್ರದಾಯ ಬೆಳೆದು ಬಂದಿದೆ ಎಂದು ಹೇಳಲಾಗುತ್ತಿದೆ.

**ಹೆಣ್ಣು ವೇಷದ ಗಂಡು ಜೋಗತಿಯರು :**

"ಒಮ್ಮೆ ವಾರಂಗದಲ್ಲಿನ ರಾಜರು ಎಲ್ಲಮ್ಮನ ಸೌಂದರ್ಯಕ್ಕೆ ಮೋಹಿತವಾಗಿ ಆಕೆಯನ್ನು ಪಡೆಯಲು ತನ್ನ ಭಟರನ್ನು ಕಳುಹಿಸಿದಾಗ, ಮುದುಕಿಯ ವೇಷದಲ್ಲಿ ಬಂದ ಎಲ್ಲಮ್ಮ ಆ ರಾಜನಿಗೆ ಪುರುಷತ್ವವನ್ನು ಕಳೆದುಕೊಂಡು, ನಪುಂಸಕನಾಗಿರುವಂತೆ ಶಾಪಕೊಡುತ್ತಾಳೆ. ಇದರಿಂದ ಪಶ್ಚಾತ್ತಾಪಪಟ್ಟ ರಾಜ ಎಲ್ಲಮ್ಮನನ್ನು ಶಾಪ ವಿಮೋಚನೆಯಿಂದ ಬಿಡುಗಡೆ ಮಾಡಬೇಕೆಂದಾಗ ಎಲ್ಲಮ್ಮ ನೀನು ಇನ್ನುಮುಂದೆ ಸ್ತ್ರೀಯ ಉಡುಗೆ-ತೊಡುಗೆಗಳನ್ನು ಧರಿಸಿಕೊಂಡು ನನ್ನನ್ನು ಸ್ಮರಿಸುತ್ತಾ, ಹಾಡುತ್ತಾ, ಭಿಕ್ಷಾಟನೆ ಮಾಡಬೇಕೆಂದು ಅನುಗ್ರಹಿಸಿದಳೆಂಬ ಅಭಿಪ್ರಾಯ ಈ ಸಂಪ್ರದಾಯದ ಜೋಗತಿಯರ ಬಗ್ಗೆ ನಂಬಿಕೆ ಇದೆ.

**ಗಂಡು ರೂಪದ ಜೋಗಪ್ಪಗಳ ಹಿನ್ನೆಲೆ :**

"ಪರುಶರಾಮನು ಕೀರ್ತಾರ್ಜುನನ್ನು ಕೊಂದು ಅವನ ದೇಹದ ಅಂಗಗಳಿಂದ ಚೌಡಿಕೆ ವಾದ್ಯವನ್ನು ತಯಾರಿಸಿ ನುಡಿಸುತ್ತಾ ತಾಯಿಯ ಬಳಿ ಬಂದನೆಂದು, ಹಾಗೆಯೇ ಮತ್ತೊಂದು

ಹೇಳಿಕೆಯ ಪ್ರಕಾರ ಮಾನಸಿಕ ವ್ಯಭಿಚಾರಿಣಿಯಾಗಿ ವ್ರತಭಂಗವಾದ ರೇಣುಕಾದೇವಿಯನ್ನು ಪತಿ ಜಮದಗ್ನಿ ಆಕೆಯನ್ನು ಕಡಿಯಲು ತನ್ನ ಹಿರಿಯ ನಾಲ್ಕು ಜನ ಪುತ್ರರಿಗೆ ಆದೇಶಿಸಿದಾಗ ಮಾತೃವಾತ್ಸಲ್ಯಗಳಾದ ಇವರು ತಂದೆಯ ಮಾತನ್ನು ನಿರಾಕರಿಸಿದಾಗ ಕೋಪಗೊಂಡ ಜಮದಗ್ನಿ ಅವರನ್ನು ನಪುಂಸಕರಾಗಿ ಎಂದು ನೀಡಿದ ಶಾಪದಿಂದಾಗಿ ಇವರು ಮುಂದೆ ಜೋಗಪ್ಪಗಳಾಗಿ ತನ್ನ ತಾಯಿಯ ಸ್ಮರಣೆಯನ್ನು ಮಾಡುತ್ತಾ ಭೀಕ್ಷಾಟನೆ ಮಾಡಿದರೆಂಬ" ಹೇಳಿಕೆಯನ್ನು ಜನಪದರ ಮೌಖಿಕ ಪರಂಪರೆಯ ಹಿನ್ನೆಲೆಯಲ್ಲಿ ಚೌಡಿಕೆ ವೃತ್ತಿಗಾಯಕರು ಹಾಡುವ ಕಥೆಗಳ ಹಿನ್ನೆಲೆಯಲ್ಲಿ ಕಾಣಬಹುದು. ದೇವಿಯ ಮಹಿಮೆಯನ್ನು ಜೋಗತಿಯರು, ಜೋಗಪ್ಪಗಳು ತಮ್ಮ ದೀಕ್ಷೆಯಿಂದ ಬಂದ ಚೌಡಿಕೆ, ಜಗ (ಪಡ್ಲಿಗೆ), ಕೊಡಗಳನ್ನು ಹೊತ್ತುಕೊಂಡು ಎಲ್ಲಮ್ಮನ ಮಹಿಮೆಗಳನ್ನು ಕೊಂಡಾಡುತ್ತಾ, ಹಾಡುತ್ತಾ ಜೀವಿಸುವರು.

**ಧಾರ್ಮಿಕ ಮತ್ತು ಸಾಮಾಜಿಕ ಸಂಪ್ರದಾಯಗಳು, ಆಚರಣೆಗಳು :**

ನಮ್ಮ ರಾಜ್ಯದ ಧಾರ್ಮಿಕ ವೃತ್ತಿಗಾಯಕರಲ್ಲಿ ಗುರುತಿಸಿಕೊಂಡಿರುವ ಈ ವೃತ್ತಿಗಾಯಕರು ಯಾವುದೇ ಒಂದು ಜನಾಂಗಕ್ಕೆ, ಸಮುದಾಯಕ್ಕೆ ಸೀಮಿತವಾಗಿರುವುದಿಲ್ಲ. ಹಾಗೆಯೇ ನಾಯಕನಹಟ್ಟಿ ವ್ಯಾಪ್ತಿಯಲ್ಲಿ ಕೆಳವರ್ಗದ ಜನರಲ್ಲಿ ಚೌಡಿಕೆ ಸಂಪ್ರದಾಯ ಆಚರಣೆಯಲ್ಲಿರುವುದನ್ನು ಗುರುತಿಸಬಹುದು. ಇವರು ಉಚ್ಚಂಗಿದುರ್ಗದ ಎಲ್ಲಮ್ಮನ ಆರಾಧಕರಾಗಿ, ಆ ಧಾರ್ಮಿಕ ಕ್ಷೇತ್ರಕ್ಕೆ ಒಕ್ಕಲಿನವರಾಗಿ ಸಂಬಂಧಿಸಿದ ಜಾತ್ರೆ, ಉತ್ಸವ, ಹುಣ್ಣಿಮೆ, ಅಮವಾಸೆ, ಹಬ್ಬ-ಹರಿದಿನಗಳು ಮೊದಲಾದ ಧಾರ್ಮಿಕ ಉತ್ಸವಾದಿಗಳಲ್ಲಿ ಭಾಗವಹಿಸುವುದರ ಮೂಲಕ ತಮ್ಮ ಹರಕೆ, ಮುಡಿಪುಗಳನ್ನು ಸಲ್ಲಿಸುತ್ತಾ ದೇವಿ ಎಲ್ಲಮ್ಮನ ಕೃಪೆಗೆ ಪಾತ್ರರಾಗುತ್ತಾರೆ.

**ಧಾರ್ಮಿಕ ದೀಕ್ಷೆ :**

ಈ ವೃತ್ತಿಗಾಯಕರು ಒಂದು ಧಾರ್ಮಿಕ ಕ್ಷೇತ್ರದ ಆರಾಧಕರಾಗಿ, ಆ ಕ್ಷೇತ್ರದ ಒಕ್ಕಲಿನವರಾಗಿರುತ್ತಾರೆ. ಹಾಗೆಯೇ ನಾಯಕನಹಟ್ಟಿಯ ವ್ಯಾಪ್ತಿಯ ಹಳ್ಳಿಯ ಜನರು ಅಥವಾ ಧಾರ್ಮಿಕ ಕ್ಷೇತ್ರ, ಹರಪನಹಳ್ಳಿ ತಾಲೂಕಿನ ಉಚ್ಚಂಗಿದುರ್ಗಎಲ್ಲಮ್ಮ. ಈ ದೇವಿಯ ದೀಕ್ಷೆಯನ್ನು ಪಡೆಯಲು ಸಂಬಂಧಿಸಿದ ಸ್ತ್ರೀ ಅಥವಾ ಪುರುಷರಿಗೆ ಮೊದಲು ಹಿರಿಯ ಜೋಗತಿಯರ ಸಮ್ಮುಖದಲ್ಲಿ ಆ ಕುಟುಂಬದವರು ಮಾತನಾಡಿ ದೀಕ್ಷೆಗೆ ಬೇಕಾದ ಪೂಜಾ ಸಾಮಗ್ರಿಗಳು ದೀಕ್ಷೆ ಪಡೆಯುವ ವ್ಯಕ್ತಿಗೆ ಬೇಕಾದ ಹೊಸ ಬಟ್ಟೆಗಳು, ಸಾರಿಗೆ, ಬುತ್ತಿ ವ್ಯವಸ್ಥೆಯನ್ನು ತಮ್ಮ ಆರ್ಥಿಕಮಟ್ಟಕ್ಕನುಗುಣವಾಗಿ ಹಿರಿಯ ಜೋಗತಿಯರ ಸಮ್ಮುಖದಲ್ಲಿ ಉಚ್ಚಂಗಿ ಗುಡ್ಡಕ್ಕೆ ಆ ವ್ಯಕ್ತಿಯು ಬಂಧು-ಬಾಂಧವರೊಡನೆ ಭಕ್ತಿಭಾವ ಪರವಶರಾಗಿ ಗೊತ್ತಾದ ದಿನದಂದು ಹೋಗಿ ಅಲ್ಲಿ ಒಂದು ರಾತ್ರಿ ತಂಗುವರು. ಅಲ್ಲಿಯ ಪೂಜಾರಿಗಳು ಪೂಜಾಕಾರ್ಯಗಳೊಂದಿಗೆ ಸಂಬಂಧಿಸಿದ ವ್ಯಕ್ತಿಯನ್ನು

ಮಡಿಯಿಂದ ಪರಿಶುದ್ಧಗೊಳಿಸಿ 'ಮುತ್ತು ಕಟ್ಟುವರು' ಆದರೆ ಇಂದು ಪೂಜಾರಿಗಳು ಮುತ್ತು ಕಟ್ಟುವುದರ ಮೂಲಕ ಅಮಾಯಕ, ಮುಗ್ಧ ಜನರ ಶೋಷಿಸುವುದನ್ನು ಕಂಡ ಸರಕಾರ ದೇವದಾಸಿ ಪದ್ಧತಿಯನ್ನು ನಿಷೇಧಿಸಿರುವುದರಿಂದ ಇದು ಕಡಿಮೆಯಾದರೂ ಸಹ ತೆರೆಮರೆಯಲ್ಲಿ ನಡೆದು ಹೋಗುತ್ತದೆ. ಹೀಗೆ ಇವರಿಗೆ ಮುತ್ತು ಕಟ್ಟುವಾಗ ದೇವಿಯ ಅನುಗ್ರಹದಿಂದ ಬಂದದ್ದು ಎಂದು ನಂಬಿರುವ ಇವರಿಗೆ ಜಗ (ಪಡ್ಲಿಗೆ), ಚೌಡಿಕೆ, ಕೊಡ ಇವುಗಳಲ್ಲಿ ಯಾವುದು ಎಲ್ಲಮ್ಮ ದಯಪಾಲಿಸುತ್ತದೆಯೊ ಅದನ್ನು ಅವರು ತಮ್ಮ ಭಿಕ್ಷಾಟನೆಯ ವೇಳೆಯಲ್ಲಿ ಬಳಸುತ್ತಾರೆ. ಹೀಗೆ ದೀಕ್ಷೆ ಪಡೆದ ಜೋಗತಿಯರು ದೇವಿಯ ವಾರಗಳಲ್ಲಿ ಕಡ್ಡಾಯವಾಗಿ ಧಾರ್ಮಿಕ ಭೀಕ್ಷೆಯನ್ನು ಅಂದರೆ ಮಂಗಳವಾರ, ಶುಕ್ರವಾರಗಳಂದು ದೇವಿಯ ಪೂಜೆಯ ಮಾಡಿ ಭಿಕ್ಷಾಟನೆ ಮಾಡುವರು. ಹಾಗೆಯೇ ಜೋಗತಿಯರು ಸಾವು ಸುದ್ದಿ ಕೇಳಿದ ಮೇಲೆ ಅದು ಸೂತಕ ಎಂದು ಸ್ನಾನಮಾಡಿ, ಪೂಜೆಮಾಡಿ ಶುದ್ಧರಾಗಬೇಕೆಂಬ ನಂಬಿಕೆ ಇವರಲ್ಲಿದೆ.

**ರಂಡೆ ತೆಗೆಯುವ ಪದ್ಧತಿ :**

ಚೌಡಿಕೆಯರಲ್ಲಿ ಮುಖ್ಯ ಧಾರ್ಮಿಕ ಸಂಪ್ರದಾಯವೆಂದರೆ ಕೀರ್ತಿವಿರ್ಯಾರ್ಜುನನು ಕಾಮಧೇನುವಿನ ಆಸೆಯಿಂದ ಜಮದಗ್ನಿ ಮುನಿಯನ್ನು ಕೊಂದಾಗ ರೇಣುಕೆ ರಂಡೆಯಾಗುತ್ತಾಳೆ ಎಂದು ನಂಬಲಾಗಿರುವಂತೆ "ಸವದತ್ತಿ ಎಲ್ಲಮ್ಮನ ಕೈಬಳೆ ತನ್ನಷ್ಟಕ್ಕೆ ತಾನೆ ಪ್ರತಿವರ್ಷ ಕಾರ್ತಿಕ ಮಾಸದ ಪೂರ್ಣಿಮೆಯ ಮಧ್ಯರಾತ್ರಿಯಲ್ಲಿ ಸಿಡಿದು ಬೀಳುತ್ತವೆಂದು ನಂಬಲಾಗುತ್ತದೆ. ಈ ಸಂದರ್ಭವನ್ನು ಕಾಯುತ್ತಾ ಕುಳಿತ ಜೋಗವ್ವ, ಜೋಗಪ್ಪ, ಬಳೆ, ಮೂಗತಿ ಮತ್ತು ಮುತ್ತನ್ನು ಅಂದರೆ ದೇವರ ತಾಳಿಯನ್ನು ಸಹ ತೆಗೆಯುತ್ತಾರೆಂದು ಹೇಳಲಾಗುತ್ತದೆ."[೫] ಹಾಗೆಯೇ ದೇವಿಯ ಒಕ್ಕಲಿರುವ ಪ್ರಮುಖ ಧಾರ್ಮಿಕ ಕ್ಷೇತ್ರಗಳ ಭಕ್ತರು ಸಹ ಈ ಪದ್ಧತಿಯನ್ನು ಅನುಸರಿಸುತ್ತಾರೆ. ನಾಯಕನಹಟ್ಟಿ ಸುತ್ತಮುತ್ತಲಿನ ಹಳ್ಳಿಗಳ ಜೋಗಪ್ಪ, ಜೋಗತಿಯರು ಈ ಆಚರಣೆಯನ್ನು ಅನುಸರಿಸುವುದರ ಮೂಲಕ ಉಚ್ಚಂಗಿದುರ್ಗದಲ್ಲಿ ನಡೆಯುವ ಧಾರ್ಮಿಕ ಕಾರ್ಯಗಳಲ್ಲಿ ಭಾಗವಹಿಸುವುದರ ಮೂಲಕ ತಮ್ಮ ಸೇವೆಯನ್ನು ಸಲ್ಲಿಸುತ್ತಾರೆ. ಆದ್ದರಿಂದ ಚೌಡಿಕೆಯವರಲ್ಲಿ ಈ ಹುಣ್ಣಿಮೆಯನ್ನು 'ರಂಡೆ ಹುಣ್ಣಿಮೆ' (ಹೊಸ್ತಿಲ ಹುಣ್ಣಿಮೆ) ಎಂದು ಕರೆಯುವುದು ಒಂದು ಸಂಪ್ರದಾಯವಾಗಿ ಬೆಳೆದು ಬಂದಿದೆ. ಈ ಹುಣ್ಣಿಮೆಗೆ ಒಂದು ಧಾರ್ಮಿಕ ಚೌಕಟ್ಟಿನ ನೆಲೆಯನ್ನು ಎಲ್ಲಮ್ಮನ ಆ ಚೌಡಿಕೆಯ ವೃತ್ತಿಗಾಯಕರು ಕೊಟ್ಟಿರುವರು. ಪುನಃ ಭರತ ಹುಣ್ಣಿಮೆಯಲ್ಲಿ ಚ್ಯುವನ ಭಾರ್ಗರವರ ಅನುಗ್ರಹದಿಂದ ಜಮದಗ್ನಿಯನ್ನು ಬದುಕಿಸಿದನೆಂದು ಹೇಳುವುದರಿಂದ ಪಾಲ್ಗುಣ ಪೂರ್ಣಿಮೆಯ ದಿನ ರೇಣುಕೆ ಪುನಃ ಮುತ್ತೈದೆಯಾದಳೆಂದು ನಂಬುವುದರಿಂದ ಜೋಗಯ್ಯ, ಜೋಗಪ್ಪಗಳು ಬಳೆ, ಮೂಗುತಿ, ದೇವರ ತಾಳಿಯನ್ನು ಪುನಃ ಪಡೆದು ಕಟ್ಟಿಕೊಂಡು 'ಮುತ್ತೈದೆ

ಹುಣ್ಣಿಮೆ' ಎಂದು ಕರೆಯಲಾಗುತ್ತದೆ. ಈ ಎರಡು ಹುಣ್ಣಿಮೆಗಳು ಎಲ್ಲಮ್ಮನ ಭಕ್ತ ಸಮೂಹಕ್ಕೆ ಪ್ರಮುಖ ಧಾರ್ಮಿಕ ಉತ್ಸವಾದಿಗಳಾಗಿ ಸಂಬಂಧಿಸಿದ ಧಾರ್ಮಿಕ ಕ್ಷೇತ್ರಗಳಲ್ಲಿ ಭಾಗವಹಿಸಿ ದೇವಿಯ ಕೃಪೆಗೆ ಪಾತ್ರರಾಗುತ್ತಾರೆ.

**ಸಂಸ್ಕಾರ :**

ಊರೊಳಗೆ ದೀಕ್ಷೆ ಪಡೆದ ಜೋಗ, ಜೋಗತಿಯರು ತೀರಿಕೊಂಡರೆ ಅಂಥವರಿಗೆ ದೀಕ್ಷೆ ಸಂದರ್ಭದಲ್ಲಿ ಮಾಡಲಾದ ಸ್ನಾನ, ಹೊಸಬಳೆ, ಸೀರೆ, ಕುಪ್ಪಸ ತೊಡಿಸಿ ಪುನಃ ಮುತ್ತನ್ನು ಕಟ್ಟುತ್ತಾರೆ. ಇದಕ್ಕೆ ಹಳೆಯ ಪಟ್ಟವೆಂದು ಸಹ ಕರೆಯುತ್ತಾರೆ. ಸಂಸ್ಕಾರ ಕ್ರಿಯೆಯಲ್ಲಿ ಭಾಗವಹಿಸಿದ ಭಕ್ತರು ಸ್ನಾನಮಾಡಿ ದೇವಿಯ ಪೂಜೆಯೊಂದಿಗೆ ಊಟಮಾಡಿ ತಮ್ಮ ನಿತ್ಯ ಕಾರ್ಯದಲ್ಲಿ ಭಾಗವಹಿಸುವರು.

**ಹರಕೆಗಳು :**

ಭಕ್ತರು ತಮ್ಮ ರೋಗ-ರುಜಿನೆಗಾಗಿ, ಕಷ್ಟ-ಕಾರ್ಪಣ್ಯಗಳ ಬಿಡುವಿನ ಮುಕ್ತಿಗಾಗಿ ಇತರೆ ಬೇಡಿಕೆಗಳ ಈಡೇರಿಕೆಗಾಗಿ ದೇವಿ ಎಲ್ಲಮ್ಮನಲ್ಲಿ ವಿವಿಧ ಬಗೆಯ ಹರಕೆಗಳನ್ನು ಹೊತ್ತುಕೊಳ್ಳುವುದರ ಮೂಲಕ ತಮ್ಮ ಬೇಡಿಕೆಗಳು ಅಥವಾ ಇಷ್ಟಾರ್ಥಗಳು ಈಡೇರಲಿ, ಬಿಡಲಿ ದೇವಿಗೆ ಕೊಟ್ಟ ಮಾತಿನಂತೆ ಹರಕೆಗಳನ್ನು ಒಪ್ಪಿಸುತ್ತಾರೆ. ಅಂತಹ ಪ್ರಮುಖ ಹರಕೆಗಳೆಂದರೆ "ಉಡುಗೊರೆ ಹರಕೆಗಳು ಅರಿಸಿನ, ಕುಂಕುಮದ ಹರಕೆ, ದೀಪದ ಹರಕೆ, ಮೀಸಲು ಕಟ್ಟುವ ಹರಕೆ, ಎಲೆ ಹರಕೆ, ಶಿಕ್ಷಾ ಹರಕೆಗಳೆಂದರೆ ಉಪವಾಸ, ಉರುಳು ಸೇವೆ, ಪಾದಯಾತ್ರೆ, ಪ್ರಾಣಿಬಲಿ. ಹರಕೆಗಳೆಂದರೆ ಕೋಳಿ, ಕುರಿ, ಮೇಕೆ, ಕೋಣ"[೬] ಹೀಗೆ ಜೋಗತಿಯರು ಹಾಗೂ ಎಲ್ಲಮ್ಮನ ಆರಾಧಕ ಭಕ್ತರು ಈ ಮೇಲ್ಕಂಡ ಹರಕೆಗಳು, ಮುಡಿಪುಗಳು ಸಲ್ಲಿಸುವುದನ್ನು ನಾವು ಇಂದಿಗೂ ಎಲ್ಲಮ್ಮನ ಧಾರ್ಮಿಕ ಕ್ಷೇತ್ರಗಳಲ್ಲಿ ಆಚರಿಸಿಕೊಂಡು ಬರುವುದನ್ನು ನೋಡಬಹುದು.

**ಚೌಡಿಕೆಯವರ ಕಥಾಮೇಳ ಪ್ರದರ್ಶನ ನಡೆಸುವ ವಿಧಾನ :**

ಎಲ್ಲಮ್ಮನ ಭಕ್ತರಾದ ಜೋಗ-ಜೋಗತಿಯರು ಪ್ರಮುಖ ಧಾರ್ಮಿಕ ವೃತ್ತಿಗಾಯಕರಾಗಿದ್ದು ಇವರು ಎಲ್ಲಮ್ಮನ ಮಹಿಮೆಯನ್ನು ಹಾಡುವಾಗ ಆಕೆಯ ಬಾಲ್ಯ, ಯೌವ್ವನ, ಮದುವೆ ಬದುಕಿನ ಕಷ್ಟದ ಯಾತನೆಗಳು, ಪವಾಡಗಳು ಕುರಿತು ಇವರು ಚೌಡಿಕೆ ನುಡಿಸುತ್ತಾ ಹಾಡುತ್ತಾರೆ. ಇವರು ೩ ರಿಂದ ೬ ಜನರವರೆಗೆ ಒಂದು ಮೇಳತಂಡವಿದ್ದು, ಇವರಲ್ಲಿ ಮುಖ್ಯ ಗಾಯಕ ಹಾಡುತ್ತಾ ಕಥೆಯನ್ನು ನಿರೂಪಿಸುತ್ತಾ ಹೋಗುವಾಗ ಉಳಿದವರು ಹಿಮ್ಮೇಳದವರಾಗಿ ಸೊಲ್ಲು ನೀಡುವುದರ ಮೂಲಕ ಪಲ್ಲವಿಗಳನ್ನು ಪುನರುಚ್ಚರಿಸುತ್ತಾರೆ. ಹೀಗೆ ಅವರು ಹಾಡುವಾಗ ಹಾವ, ಭಾವ, ನಯ, ನಾಜೂಕುಗಳು ಕೇಳುಗರಲ್ಲಿ ಶ್ರದ್ಧೆ, ಭಯ, ಭಕ್ತಿಯನ್ನು ಮೂಡಿಸುತ್ತದೆ.

ಇವರು ಕಥಾಮೇಳಗಳನ್ನು ಭಕ್ತರ ಆಹ್ವಾನ ಮೇರೆಗೆ ಇಲ್ಲವೆ ಊರುಗಳ ಮುಖಂಡರ ಆಹ್ವಾನದ ಮೇರೆಗೆ ಹೋಗಿ ನಡೆಸಿಕೊಡುವರು. ಈ ಕಥಾಮೇಳದಲ್ಲಿ ಮುಖ್ಯ ಗಾಯಕರು ತನ್ನ ಚೌಡಿಕೆಯನ್ನು ನುಡಿಸುತ್ತಾ ಭಾಗವತನ ರೀತಿ ನಿರ್ದೇಶಕನ ಪಾತ್ರವನ್ನು ನಿರ್ವಹಿಸುತ್ತಾ, ಸಹಕಲಾವಿದರಿಂದ (ಹಿಮ್ಮೇಳದವರಿಂದ) ಸಂದರ್ಭಕ್ಕೆ ತಕ್ಕಂತೆ ಆಂಗಿಕ ಅಭಿನಯ, ನೃತ್ಯ, ಸಂಗೀತಗಳ ಮಿಶ್ರಣದೊಂದಿಗೆ ದೇವಿಯ ಮಹಿಮೆಯ ಹಾಡುಗಳನ್ನು ಹಾಡುತ್ತಾ, ನಂತರ ಅದರ ತಾತ್ಪರ್ಯವನ್ನು ಹೇಳುತ್ತಾ ಕಥೆಯ ನಿರೂಪಿಸುವಾಗ ಮಧ್ಯ ಮಧ್ಯ ವಿರಮಿಸುತ್ತಾ ಶ್ರೋತೃಗಳಿಗೆ ಬೇಸರ ಉಂಟಾಗದಂತೆ ನಿದ್ರೆಯಿಂದ ಎಚ್ಚರವಾಗಿರುವಂತೆ ನವುರಾದ ಹಾಸ್ಯದೊಂದಿಗೆ ವಾಸ್ತವಿಕ ಬದುಕಿಗೆ ಸಮೀಕರಿಸಿ ಉಪಕಥೆಗಳನ್ನು ಹೇಳುತ್ತಾ ಕಥಾಮೇಳಗಳನ್ನು ಪುನಃ ಮುಂದುವರಿಸುವರು.

ಈ ಸಂದರ್ಭಗಳಲ್ಲಿ ಕಥಾಮೇಳಗಳನ್ನು ನಡೆಸುತ್ತಾರೆ. ಅಂತಹ ಸಂದರ್ಭಗಳೆಂದರೆ ಹೊಸ ಜೋಗತಿಯರಿಗೆ ಮುತ್ತು ಕಟ್ಟಿಸುವುದಕ್ಕೆ ಮುಂಚೆ, ಮಳೆಯ ಪ್ರಾರ್ಥನೆಗಾಗಿ ಹರಕೆ ಹೊತ್ತುಕೊಂಡವರು ಬೇಡಿಕೆ ಈಡೇರಿಕೆಗಾಗಿ ಜೋಗತಿ ಪರವು ಮಾಡುವಾಗ ದೇವಿಯ ಕಥೆಯನ್ನು ವರ್ಷಕ್ಕೆ ಒಂದು ಸಲವಾದರು ಕೇಳಬೇಕೆಂಬ ಜನಪದರ ನಂಬಿಕೆಗೆ, ರೋಗ-ರುಜಿನಗಳ ನಿವಾರಣೆಗಾಗಿ, ಕಷ್ಟ-ಕಾರ್ಪಣ್ಯಗಳ ಬಂಧನದಿಂದ ಮುಕ್ತರಾಗಲು ಹೀಗೆ ಹಲವಾರು ಸಂದರ್ಭಗಳಲ್ಲಿ ಕಥಾಮೇಳಗಳು ನಡೆಸುತ್ತಾರೆ. ಹಾಗೆಯೇ ಗ್ರಾಮಗಳಲ್ಲಿ ನಡೆಯುವ ಜಾತ್ರೆ, ಉತ್ಸವ, ಹಬ್ಬ-ಹರಿದಿನ ಮೊದಲಾದ ಧಾರ್ಮಿಕ, ಸಾಮಾಜಿಕ ಆಚರಣೆಗಳ ಸಂದರ್ಭಗಳಲ್ಲಿ ಇವರು ಎಲ್ಲಮ್ಮನ ಮಹಿಮೆಯನ್ನು ಒಂದು ರಾತ್ರಿಯೆಲ್ಲಾ ಹಾಡುತ್ತಾ ಕಥೆಯನ್ನು ನಿರೂಪಿಸುತ್ತಾರೆ. ಕಥಾಮೇಳ ಪ್ರಾರಂಭಿಸುವಾಗ ದೇವಿಯ ಪೂಜೆಯೊಂದಿಗೆ ಪ್ರಾರ್ಥನೆ ಮಾಡಿ ಕಥೆಯ ಕೊನೆಯಲ್ಲಿ ಮಂಗಳಾರತಿ ಮಾಡಿ ಕಥಾಮೇಳವನ್ನು ಕೊನೆಗೊಳಿಸುತ್ತಾರೆ.

ಹೀಗೆ ತಮ್ಮ ಕಥಾಮೇಳದ ಸಂದರ್ಭದಲ್ಲಿ ಚೌಡಿಕೆಯವರು ದೇವಿಯ ಚರಿತ್ರೆ, ನೈತಿಕತೆಯ ಬೋಧನೆ, ಸಾಮಾಜಿಕ ಸಂಪ್ರದಾಯಗಳನ್ನು, ಬದುಕಿನ ಏಳು-ಬೀಳಗಳನ್ನು ತಮ್ಮ ಕಥಾಮೇಳದಲ್ಲಿ ಹೇಳುತ್ತಾ ಜನರಿಗೆ ದೈವಿಕ, ಆಧ್ಯಾತ್ಮಿಕ, ಭಯ, ಭಕ್ತಿಯ ಸಂದೇಶ, ಮನರಂಜನೆಯನ್ನು ನೀಡಿ ಅವರಿಂದ ದವಸ-ಧಾನ್ಯಗಳು, ಹಣ, ಉಡುಗೊರೆಗಳನ್ನು ಸ್ವೀಕರಿಸುತ್ತಾ ದೇವಿಯ ಕೃತಾರ್ಥಕ್ಕೆ ಪಾತ್ರರಾಗುತ್ತಾ ಜೀವಿಸುವರು. ಎಲ್ಲಮ್ಮನ ಕಥಾಮೇಳಗಳನ್ನು ನಡೆಸುವುದರಿಂದ ಒಳ್ಳೆಯದಾಗುತ್ತೆ ಎಂದು ನಂಬಿರುವ ಜನಪದರು ವೀಳ್ಯವನ್ನು ಕೊಟ್ಟು ತಮ್ಮ ಗ್ರಾಮಗಳಲ್ಲಿ, ಕುಟುಂಬಗಳಲ್ಲಿ ಕಥಾಮೇಳ ನಡೆಸುವಂತೆ ಅವರಿಗೆ ಆಹ್ವಾನ ನೀಡಿ, ಅದಕ್ಕೆ ಪ್ರತಿಫಲವಾಗಿ ದವಸ-ಧಾನ್ಯ, ಹಣ ಉಡುಗೊರೆಗಳನ್ನು ನೀಡಿ ಎಲ್ಲಮ್ಮನ ಭಕ್ತಿಗೆ ತಮ್ಮ ಸೇವೆಯನ್ನು ಈ ಕಥಾಮೇಳವನ್ನು ಏರ್ಪಡಿಸುವುದರ ಮೂಲಕ ಹಾಗೂ ಚೌಡಿಕೆ ವೃತ್ತಿಗಾಯಕರಿಗೆ ಪ್ರೋತ್ಸಾಹ ನೀಡುವುದರ ಮೂಲಕ ದೇವಿಯ

ಇಷ್ಟಾರ್ಥಕ್ಕೆ ಪಾತ್ರರಾಗುತ್ತಾರೆ. ಹಾಗೆಯೇ ಚೌಡಿಕೆಯರು ಅಪ್ಪಟ ನಿರಕ್ಷರ ಕುಡಿಗಳಾಗಿದ್ದರು. ತಮ್ಮ ದೈವತ್ವ ಹಿನ್ನೆಲೆಯಲ್ಲಿ ನಮ್ಮ ಮೌಖಿಕ ಪರಂಪರೆಯ ಪ್ರಚಾರದಲ್ಲಿ ಅವರ ಕಾರ್ಯ ಶ್ಲಾಘನೀಯ.

**ವಾದ್ಯ ಪರಿಕರಗಳು :**

ಇವರ ಮುಖ್ಯ ವಾದ್ಯಗಳು ಚೌಡಿಕೆ, ತಾಳ, ಮದ್ದಳೆ (ತಬಲ), ಗೆಜ್ಜೆ ಮೊದಲಾದವು. ಇವರು ಮುಖ್ಯವಾಗಿ ಬಳಸುವ ಚೌಡಿಕೆಯಿಂದ ಇವರಿಗೆ ಚೌಡಿಕೆಯವರೆಂದು ಗುರುತಿಸಲಾಗಿದೆ. ಚೌಡಿಕೆಯನ್ನು ಸಾಹಿತ್ಯ, ಸಂಗೀತ ಮತ್ತು ನೃತ್ಯ ಈ ಮೂರುಗಳ ಸಮ್ಮಿಶ್ರಣ ಕಲೆಯೆಂದು ಹೇಳಬಹುದು.

ಚೌಡಿಕೆ ಹುಟ್ಟಿನ ಹಿನ್ನೆಲೆಯನ್ನು ಎಲ್ಲಮ್ಮ ಒಕ್ಕಲಿನವರು ಪರುಶರಾಮನು ಕೀರ್ತಾವಿಯಾರ್ಜುನನ್ನು ಕೊಂದು ಅವನ ದೇಹದ ಅಂಗಾಗಳಿಂದ ಮಾಡಿದನೆಂದು ಮತ್ತೊಂದು ಕಥೆಯು ಬೇಟಾಸುರನೆಂಬ ರಾಕ್ಷಸನನ್ನು, ತಾಯಿ ರೇಣುಕಾದೇವಿಯ ಆಜ್ಞೆಯಂತೆ ಪರುಶರಾಮನು ಕೊಂದು ಅವನ ದೇಹದಿಂದ ಚೌಡಿಕೆಯನ್ನು ತಯಾರಿಸಿದನೆಂದು ಹೇಳುವುದರ ಮೂಲಕ ಈ ವಾದ್ಯಕ್ಕೆ ಒಂದು ಧಾರ್ಮಿಕ ಚೌಕಟ್ಟನ್ನು ಕಲ್ಪಿಸಿ ಅದನ್ನು ಪೂಜಿಸುವುದನ್ನು ಕಾಣಬಹುದು.

**ಉಡುಗೆ-ತೊಡುಗೆಗಳು :**

ಚೌಡಿಕೆ ಸಂಪ್ರದಾಯದ ವೃತ್ತಿಗಾಯಕರಲ್ಲಿ ಲಿಂಗತಾರತಮ್ಯವಿಲ್ಲದೆ ಉಡುಗೆ-ತೊಡುಗೆಳಲ್ಲಿ ಮೂರು ಬಗೆಯ ವೃತ್ತಿಗಾಯಕರನ್ನು ಗುರುತಿಸಬಹುದು.

* **ಹೆಣ್ಣು ವೇಷದಲ್ಲಿರುವ ಗಂಡು ಜೋಗಪ್ಪಗಳು :** ಇವರು ಸ್ತ್ರೀಯರ ವೇಷಭೂಷಣಗಳನ್ನು ಧರಿಸಿ ಕೊರಳಲ್ಲಿ ದೇವಿಯ ತಾಳಿಯನ್ನು, ತಲೆ ಮೇಲೆ ದೇವಿಯ ವಿಗ್ರಹದ ಕೊಡ, ಹಣಗೆ ಕುಂಕುಮ, ಬಾಲಿಕೆ ವಾದ್ಯ ಜೋಳಿಗೆ ಹಾಕಿಕೊಂಡು ಭಿಕ್ಷಾಟನೆ ಮಾಡುತ್ತಾರೆ.

* **ಜೋಗಪ್ಪಗಳು :** ಇವರನ್ನು ಪರುಶರಾಮನೆಂದು ಕರೆಯಲಾಗುತ್ತದೆ. ಇವರು ಮಾಮೂಲು ಪುರುಷ ಉಡುಪುಗಳನ್ನು ಧರಿಸುತ್ತಾರೆ. ಆದರೆ ದೇವಿಯ ಲಾಂಛನದ ಮುತ್ತುಗಳ ಸರ, ಭಂಡಾರ ಚೀಲ, ಜೋಳಿಗೆ ಹಾಕಿಕೊಂಡು ಭಿಕ್ಷಾಟನೆ ನಡೆಸುತ್ತಾರೆ.

* **ಜೋಗತಿಯರು :** ಇವರು ಸ್ತ್ರೀ ವೇಷಭೂಷಣಗಳನ್ನು ಧರಿಸಿದರೂ ದೇವಿಯ ಧಾರ್ಮಿಕ ಉತ್ಸವಾದಿಗಳಲ್ಲಿ ಬಿಳಿಸೀರೆ, ಕುಪ್ಪಸ ಧರಿಸುತ್ತಾರೆ. ಕೊರಳಿಗೆ ಮುತ್ತಿನ ಸರ, ಹಣೆಯಲ್ಲಿ ಕುಂಕುಮ, ಭಂಡಾರದ ಚೀಲ, ಗೆಜ್ಜೆಗಳನ್ನು ಕಟ್ಟಿಕೊಂಡು, ಪಡ್ಲಗಿಯನ್ನು ಹೊತ್ತುಕೊಂಡು ದೇವಿಯ ಹೆಸರಿನಲ್ಲಿ ಭಿಕ್ಷಾಟನೆ ಮಾಡುತ್ತಾರೆ.

**ಚೌಡಿಕೆಯವರ ಹಾಡುಗಳ ಸ್ವರೂಪ ಮತ್ತು ಸಾಹಿತ್ಯಿಕ ಮೌಲ್ಯ :**

ಮೌಖಿಕ ಪರಂಪರೆಯ ಪ್ರತಿನಿಧಿಗಳಾದ ಚೌಡಿಕೆಯವರು ಎಲ್ಲಮ್ಮ ಹುಟ್ಟಿನಿಂದ ಹಿಡಿದು ಸಾವಿನವರೆಗೂ ಕುರಿತು ಆಕೆಯ ಬದುಕಿನ ವಿವಿಧ ಘಟನೆಗಳನ್ನು, ಪವಾಡಗಳನ್ನು ಕುರಿತು ಹಾಡುಗಳನ್ನು ಮೌಖಿಕ ಸಾಹಿತ್ಯದಲ್ಲಿ ನಾವು ಕಾಣಬಹುದು. ಇದರ ಜೊತೆಗೆ ಚೌಡಿಕೆಯವರು ಇತ್ತೀಚಿಗೆ ಸ್ಥಳೀಯ ದೇವರಗಳನ್ನು ಕುರಿತು ಹಾಡುವರು.

ಎಲ್ಲಮ್ಮನ ಕಥೆಯನ್ನು ಇವರು ಕಾವ್ಯಾತ್ಮಕ, ಗೀತಾತ್ಮಕವಾಗಿ ಹೆಚ್ಚು ಹಾಡಿದರೆ ಕಥಾಮೇಳದ ಸಂದರ್ಭದಲ್ಲಿ ಚಂಪು ಶೈಲಿಯಲ್ಲಿ ಅಂದರೆ ನಿರೂಪಣೆ, ಸಂಭಾಷಣೆ ರೀತಿಯ ಕಥೆ ಹೇಳವರು. ಹಾಗೆಯೇ ತಾವು ಹೇಳುವ ಉಪಕಥೆಗಳನ್ನು ಇವರ ಸಾಹಿತ್ಯದಲ್ಲಿ ಕಂಡುಬರುವುದು. ಎಲ್ಲಮ್ಮನ ಮಹಿಮೆಯನ್ನು ಕುರಿತ ಜನಪದರಲ್ಲಿ ಇರುವ ಭಕ್ತಿಯನ್ನು ಈ ಕೆಳಗಿನ ಹಾಡಿನಿಂದ ಗುರುತಿಸಬಹುದು.

"ಏಳು ಎಲ್ಲವ್ವ ತಾಯಿ, ಏಟ್ಹೊತ್ತ ಮಲಗಿದಿ
ನೀರೆಂಜಲಾಗಿ ಗಿಣಿಕುಡಿದ । ಎಲ್ಲವ್ವ ತಾಯಿ
ಹೂವೆಂಜಲಾಗಿ ಹುಳಮುಟ್ಟಿ"।೬

ಜನಪದರು ತಮ್ಮ ಕೆಲಸ ಕಾರ್ಯಗಳನ್ನು ಸದಾ ದೇವಿ ನಮ್ಮ ಜೊತೆಗಿರುವಳೆಂದು, ಅವಳಿಗೆ ಪಶು-ಪಕ್ಷಿಗಳಿಂದ ಎಂಜಲಾಗದ ನೀರು, ಹೂ ಮೂಡಿಸಿ ಪೂಜಿಸುವುದರ ಮೂಲಕ ದೇವಿಯ ಇಷ್ಟಾರ್ಥಕ್ಕೆ ಪಾತ್ರರಾಗುವುದರ ಮೂಲಕ ದೇವಿಯನ್ನು ದಿನನಿತ್ಯದ ಬದುಕಿನಲ್ಲಿ ಏಳುವ ಮೊದಲೇ ಸುತ್ತಿಸಿ, ಪ್ರಾರ್ಥಿಸುತ್ತಾರೆ.

"ಶರಣೆ ಎಲ್ಲಮ್ಮನಿಗೆ ಕೈ ಮುಗಿದೆವು ನಾವು
ದುರ್ಗಕ್ಕೆ ಹೋಗಾ ಆದೇಳು । ದಿನದುಳ್ಳ
ಜೇಡಿ ಕೆಮ್ಮಣ್ಣು ಮೊದಲ್ಹಾಯ್ದು ॥
ಅಪನ ಕಾಲದ ತಾತಯ್ಯ ಮಾಡಿದ ಹರಕೆ
ತುಪ್ಪದ ಕೊಡದೀಗೆ ಎಳದಾವೆ । ಎಲ್ಲಮ್ಮನ
ಹರಕೆಯ ದುಡ್ಡು ಸಲಿಸೇವು" ॥ಶರಣ॥

ತನ್ನ ಇಷ್ಟಾರ್ಥಗಳ ಈಡೇರಿಕೆಗಾಗಿ ಹರಕೆಗಳನ್ನು ಹೊತ್ತುಕೊಂಡ ಭಕ್ತರು ದೇವಿಗೆ ಸಲ್ಲಿಸುವ ಸೇವೆಯನ್ನು ಕಾಣಬಹುದು. ಅಂದರೆ ಹರಕೆ ಸಲ್ಲಿಸಲು ಮನೆ ಶುಚಿಗೊಳಿಸಿ ನಂತರ ತಮ್ಮ ಹರಕೆ, ಮುಡುಪುಗಳನ್ನು ಸಲ್ಲಿಸಲು ಉಚ್ಚಂಗಿದುರ್ಗಕ್ಕೆ ಹೋಗಿ ಹರಕೆ, ಚೌರಸೇವೆ, ತುಲಾಭಾರ, ಭಂಡಾರಸೇವೆ ಅರ್ಪಿಸುವುದರ ಮೂಲಕ ದೇವಿಯ ಇಷ್ಟಾರ್ಥಕ್ಕೆ ಕೃತಾರ್ಥರಾಗುತ್ತಾರೆ. ಹೀಗೆ ನಮ್ಮ ಜನಪದದಲ್ಲಿರುವ ಅತಿಯಾದ ದೈವಭಕ್ತಿಯನ್ನು ಇಲ್ಲಿ ಗುರುತಿಸಬಹುದು.

"ಮುನ್ನೂರರವತ್ತು ಸಿದ್ಧರ ಗುಡ್ಡದಾಗ
ಆಳ್ವಿಕೆ ಮಾಡ್ಯಾರೋ ಬಲ್ಲಿಂಗ
ಚಕ್ರ ಹತಿಯಾರ, ತಯ್ಯಾರ ಮಾಡ್ಯಾಳ್ಳಾಗ
ಸಿದ್ಧರ ಹೊಡದಳೋ ಕ್ಷಣದಾಗ
ದೈತ್ಯರನ್ನು ಹೊಡದಾಳೊ ಗಳಿಗ್ಯಾಗ"[೮]

ಉಗ್ರಸ್ವರೂಪಿಣಿ, ಮಹಾಮಾತೆ ಎಲ್ಲಮ್ಮನು ಶಿಷ್ಟರ ರಕ್ಷಿಣಿಯಾಗಿ, ದುಷ್ಟರ ಶಿಕ್ಷಿಣಿಯಾಗಿ ಆದಿಶಕ್ತಿಯ ಸ್ವರೂಪವನ್ನು ತಾಳಿ ತನಗೆ ಅಡ್ಡವಾದ ಸಿದ್ಧರ ಸಂಹಾರದ ಮೂಲಕ ತನಗೆ ಕೆಡಕನ್ನು ಬಯಸಿದವರಿಗೆ ದುಷ್ಟರ ಸಂಹಾರಿಣಿಯಾಗಿ ಆಕೆಯ ಉಗ್ರಸ್ವರೂಪದ ಚಿತ್ರಣವನ್ನು ನೋಡಬಹುದು.

"ಉಧೋ, ಉಧೋ ಉಚ್ಚಂಗಿದುರ್ಗವ್ವ ಬಲು ದೊಡ್ಡವಳು
ಭೋಗವತಿ ರೇಣುಕರಾಜ ಆದಿಶಕ್ತಿಯ ವ್ರತಮಾಡಿ
ಪರಿಪರಿ ಬೇಡಿಕೊಂಡು ಆದಿಶಕ್ತಿಯನ್ನು ಒಲಿಸಿಕೊಂಡು
ದೇವಿ ನಿನ್ನ ಪಡಿದಾರಮ್ಮ ॥
ಉಚ್ಚಂಗಿ ಗುಡ್ಡ್ಯಾಕ ಬಂದು ನೆಲೆಸಿ ಕೋಟಿ ಭಕ್ತರ ಕರಸೀ
ಬಂದವರಿಗೆ ಕರುಣತೋರಿ ಮಾಡಿದೆಲ್ಲಾ ಭಂಡಾರ ಸೂರಿ
ಉಧೋ ಉಧೋ ಅನಸಿದಿ ದುರ್ಗ"

ಆದಿಶಕ್ತಿಯ ಹಿನ್ನೆಲೆ, ಅವಳ ಮಹಿಮೆಗಳನ್ನು ಸಾರುತ್ತಾ ಮಕ್ಕಳಿಲ್ಲದ ಭೋಗವತಿ, ರೇಣುಕರಾಜ, ಆದಿಶಕ್ತಿಯ ವ್ರತಮಾಡಿ ರೇಣುಕಾದೇವಿಯನ್ನು ಪಡೆದು ಜಮದಗ್ನಿ ಮುನಿಗೆ ವಿವಾಹ ಮಾಡಿಕೊಟ್ಟು ನಂತರ ವ್ರತಭಂಗಳಾದ ಆಕೆಯನ್ನು ಜಮದಗ್ನಿಯ ಆಜ್ಞೆಯ ಮೇರೆಗೆ ಪರುಶರಾಮನಿಂದ ಕಡಿದು ತದನಂತರ ಅವನ ಬೇಡಿಕೆಯಂತೆ ತಂದೆಯ ಅನುಗ್ರಹದಿಂದ ತಾಯಿಯನ್ನು ಮರಳಿ ಪಡೆದು ಲೋಕಮಾತೆಯ ಮಹಿಮೆಯನ್ನು ಇಡೀ ಜಗತ್ತಿಗೆ ಪ್ರಚಾರ ಮಾಡಿದನು. ಹೀಗೆ ಪುರುಷ ಮತ್ತು ಹೆಣ್ಣಿನ ಮುಖಾಮುಖಿ ಸಂಘರ್ಷದ ನೆಲೆಯನ್ನು, ಮಾತೃದೇವಾರಾಧನೆಯ ಹಿನ್ನೆಲೆಯನ್ನು ಕಾಣಬಹುದು. ಪುರುಷ ಸಮಾಜ ಒಡ್ಡಿದ ಅನೇಕ ಅಗ್ನಿ ಪರೀಕ್ಷೆಗಳನ್ನು ಎದುರಿಸಿ ಅದರಿಂದ ಪರಿಹಾರ ಪಡೆದುಕೊಂಡು ಉಚ್ಚಂಗಿದುರ್ಗಕ್ಕೆ ಬಂದು ಕೋಟ್ಯಾಂತರ ಭಕ್ತರನ್ನು ಹೊಂದಿರುವ ನೀನು ಅಸಾಮಾನ್ಯಳಲ್ಲ ಎಂಬುದು ಎಲ್ಲಮ್ಮನ ಭಕ್ತರ ಮನಸ್ಸಿನಲ್ಲಿ

ಎಲ್ಲಿ ಕಾಣೆಲ್ಲಿ ಕಾಣೆ ಎಲ್ಲಮ್ಮ
ನಿನ್ನಂಥಾಕೀನೆಲ್ಲಿ ಕಾಣಲ್ಲಿ ಕಾಣೆ

ಕಂಚಿನ ಚೌಡಿಕೆ ಮಿಂಚುವ ಜೋಗತಿ
ಪಂಚಾಳಿಕೋಟಿ ಶಬ್ಧವ ಎಲ್ಲಮ್ಮ
ಕಂಚಿ ಜೋಗಂಡ ಬಂದಾಳ"[೯]

ಚೌಡಿಕೆ ಸಂಪ್ರದಾಯದವರು ದೇವಿಯ ಸರ್ವವ್ಯಾಪಿಯನ್ನು ಮಹಿಮೆಯನ್ನು ಹುಡುಕುತ್ತಾ ಅವರು ಬಳಸುವ ವಾದ್ಯ ಪರಿಕರಗಳನ್ನು, ಉಡುಗೆ-ತೊಡುಗೆಗಳನ್ನು ಗುರುತಿಸಿದೆ..

"ಎಲ್ಲಮ್ಮ ಅನ್ನುವಾಕೆ ದಲ್ಲಾಳಗಿತ್ತಿ
ಎಲ್ಲರಿಗೆ ಬೇವ ಉಡಿಸ್ಯಾಳೊ । ಗಂಡಸರಿಗೆ
ಸಾಗಿ ಗುಡ್ಡಕ ನಡಸ್ಯಾಳ ![೧೦]

ಎಲ್ಲಮ್ಮ ಪುರುಷ ವಿರೋಧಿ ಭಾವನೆಯನ್ನು ಅವಳ ಸಂಘರ್ಷದ ಜೀವನದ ಮೂಲಕ ಪುರುಷರಿಂದ ಅವಗಣನೆಗೆ ಒಳಗಾದ ಮತ್ತು ತನ್ನ ಬಗ್ಗೆ ಹಂಗಿಸುವ, ನಿರ್ಲಕ್ಷಿಸುವ, ಉದ್ದಟಿಸುವವರಿಗೆ ಬುದ್ಧಿ ಹೇಳಿ ಅವರನ್ನು ಹಣ್ಣುಗಾಯಿ-ನೀರುಗಾಯಿ ಮಾಡಿ ತನ್ನ ಸೇವೆಯನ್ನು ಮಾಡುವಂತೆ ಜೋಗಪ್ಪರನ್ನಾಗಿ ಮಾಡುವುದುರ ಮೂಲಕ ಅವರನ್ನು ತನ್ನ ಸೇವೆಗೆ ಅಣಿಗೊಳಿಸುವಳು. ಭಕ್ತರ ಭಕ್ತಿಯನ್ನು ಪರೀಕ್ಷಿಸಲು ಜೋಗತಿ ವೇಷದಲ್ಲಿ ಬಂದು ಭಿಕ್ಷೆ ಬೇಡುವುದರ ಮೂಲಕ ಅವರ ಭಕ್ತಿಯನ್ನು ಪರೀಕ್ಷಿಸುವ ಹಾಡನ್ನು ಗುರುತಿಸಲಾಗಿದೆ.

"ಒಂದು ಉಳ್ಳಾಗಡ್ಡಿ ಬೇಡಿದರ
ನಿನ್ನ ಮಾರಿಮ್ಯಾಲ ಹೊಡದೇನಂದ
ಒಂದು ಬಳ್ಳೊಳ್ಳಿ ಬೇಡಿದರ
ನಿನ್ನ ಮೊಸಡಿ ಮ್ಯಾಲ ಹೊಡಿದನೆಂದ..."[೧೧]

ಭಕ್ತರ ಉದ್ಧಟತನದಿಂದ ಬೇಸತ್ತ ದೇವಿಯು ಉಗ್ರರೂಪತಾಳಿ ಕೈಯಲ್ಲಿ ಭಂಡಾರ ತೂರಿ ನಿನಾಲ್ಕೊ ಉಧೋ ಉಧೋ ಎಂದು ಉದ್ಘಟಿಸಿ ಉಗ್ರಸ್ವರೂಪಿಣಿಯಾಗಿ ಹೊರಟು ಹೋದ ತಕ್ಷಣ ಭಕ್ತರಿಗೆ ತೊಂದರೆ, ಹಾನಿಯುಂಟಾಗುತ್ತದೆಂಬ ನಂಬಿಕೆ ಇಂದಿಗೂ ಚೌಡಿಕೆಯರಲ್ಲಿ ನಮ್ಮ ಜನಪದರಲ್ಲಿ ಇದೆ.

ಹಾಗೆಯೇ ಚೌಡಿಕೆಯವರು ಸ್ಥಳೀಯ ದೇವರಗಳನ್ನು ಕುರಿತು ಹಾಡೊಂದನ್ನು ಗುರುತಿಸಲಾಗಿದೆ.

"ಓ ರಂಗ ನಿನ್ನ ಧ್ಯಾನದಲ್ಲಿ ಇರುವೆ
ಓ ರಂಗ ನನ್ನ ಬಾಳಿಗೆ ಬಾರಾ!
ಹರಿನಾರಾಯನ ಓ ಭೋಸೆರಂಗ"[೧೨]

ಎಂದು ಸೋಬಾನೆ ರೀತಿಯಲ್ಲಿ ಹೇಳುತ್ತಾ ಸ್ಥಳೀಯ ದೇವರಾದ ಬೋಸೆರಂಗಸ್ವಾಮಿಯನ್ನು ನೆನೆಯುತ್ತಾ ನೀನು ನಮ್ಮ ಬದುಕಿಗೆ ದಾರಿದೀಪವಾಗುವುದೆಂದು ಶ್ರೀ ಹರಿಯು ಆದ ವಿಷ್ಣುವಿನಲ್ಲಿ ಮೊರೆಯಿಡುವುದನ್ನು ಚೌಡಿಕೆಯವರ ಭಕ್ತಿಯ ಶ್ರೇಷ್ಠತೆಯನ್ನು ನೋಡಬಹುದು.

ಒಟ್ಟಿನಲ್ಲಿ ಚೌಡಿಕೆ ಸಂಪ್ರದಾಯದವರ ಹಾಡಿನ ಹಿನ್ನೆಲೆಯನ್ನು ಗಮನಿಸಿದಾಗ ಮುಖ್ಯವಾಗಿ ಅವರ ಗೀತೆಗಳಲ್ಲಿ, ಕಥೆಗಳಲ್ಲಿ ಸರಳವಾದ ಭಾವನಾತ್ಮಕತೆ, ಸರಳತೆ, ಮುಗ್ಧತೆ, ಗೀತಪ್ರಧಾನತೆ, ಆಡುಮಾತಿನ ಶಾಬ್ಧಿಕರೂಪದ ಮೌಖಿಕ ಪರಂಪರೆಯನ್ನು ಗುರುತಿಸಬಹುದು. ಮೌಖಿಕ ಪರಂಪರೆಯ ಪ್ರತನಿನಿಧಿಗಳಾದ ಚೌಡಿಕೆ ಸಂಪ್ರದಾಯದ ವೃತ್ತಿಗಾಯಕರು ಸಂಬಂಧಿಸಿದ ಧಾರ್ಮಿಕ ಕ್ಷೇತ್ರದ ದಿಕ್ಷೆಯನ್ನು ಪಡೆದುಕೊಂಡು, ಆ ಕ್ಷೇತ್ರದ ಧಾರ್ಮಿಕ ಉತ್ಸವಾದಿಗಳಲ್ಲಿ ಭಾಗವಹಿಸುವುದರ ಮೂಲಕ ದೈವ ಭಕ್ತಿಯ ಪರಾಕತೆಯನ್ನು ವೈಭವೀಕರಿಸಿ ತಮ್ಮ ಧಾರ್ಮಿಕ ಶ್ರದ್ಧೆಯನ್ನು ಅಭಿವ್ಯಕ್ತಿಗೊಳಿಸುವವರು.

ತಮ್ಮ ಸಾಹಿತ್ಯದಲ್ಲಿ ಎಲ್ಲಮ್ಮನ ಮಹಿಮೆ, ಜೀವನ ಚರಿತ್ರೆಯನ್ನು ಜೊತೆಗೆ ಸ್ಥಳೀಯ ದೇವರು–ದಿಂಡರುಗಳಾದ ತಿಪ್ಪೇಸ್ವಾಮಿ, ಮಾರಮ್ಮ, ಚೌಡಮ್ಮ, ಮಾಯಮ್ಮ, ಕೋಲಾರಮ್ಮ, ಬೋಸೆದೇವರು, ಬೊಮ್ಮೆದೇವರು, ಜಗಲೂರಜ್ಜ, ಗಾದ್ರಿಪಾಲನಾಯಕ, ಓಬಳದೇವರು ಮೊದಲಾದ ದೇವರು, ದೇವತೆಗಳನ್ನು ಕುರಿತು ಸ್ಥಳೀಯ ಜನಪದ ಕತೆಗಳು, ಗಾದೆಗಳು, ಒಗಟುಗಳು, ಸೋಬಾನೆ ಪದಗಳನ್ನು ಸಹ ತಮ್ಮ ಕಥಾಮೇಳಗಳಲ್ಲಿ ನಡೆಸುವ ಸಂದರ್ಭದಲ್ಲಿ ಸಮಯೋಚಿತವಾಗಿ ಬಳಸುವುದನ್ನು ಇಂದಿಗೂ ನಾವು ಕಾಣಬಹುದು. ಹೀಗೆ ನಮ್ಮ ಮೌಖಿಕ ಪರಂಪರೆಯ ಪ್ರಚಾರಕರಾಗಿ ಅಳಿವಿನಂಚಿನಲ್ಲಿರುವ ನಮ್ಮ ಸಂಸ್ಕೃತಿಯನ್ನು ಉಳಿಸಿ, ಬೆಳೆಸುವಲ್ಲಿ ಚೌಡಿಕೆ ವೃತ್ತಿಗಾಯಕರ ಪಾತ್ರ ಅನನ್ಯವಾದುದು.

**೩.೪. ಕಿನ್ನರಿ ಜೋಗಿಗಳು :**

ಮೌಖಿಕ ಪರಂಪರೆಯಲ್ಲಿ ಕಂಡುಬರುವ ಪ್ರಮುಖ ಲೌಕಿಕ ವೃತ್ತಿಗಾಯಕ ಸಮುದಾಯಗಳಲ್ಲಿ ಕಿನ್ನರ ಜೋಗಿಗಳು. ತಮ್ಮ ಕಲಾ ನೈಪುಣ್ಯತೆ, ರಸವತ್ತಾದ ಗಾಯನದಿಂದ ನಮ್ಮ ಜನಪದರಲ್ಲಿ ಪ್ರಮುಖ ಸ್ಥಾನ ಪಡೆದುಕೊಂಡಿರುವ ವೃತ್ತಿಗಾಯಕ ವರ್ಗ.

ಮೂಲತಃ ಅಲೆಮಾರಿ ಸಮುದಾಯವಾದ ಇವರು ನಾಯಕನಹಟ್ಟಿ ವ್ಯಾಪ್ತಿಯಲ್ಲಿ ಎನ್. ದೇವರಹಳ್ಳಿ, ಗೌರಿಪುರ ಗ್ರಾಮಗಳಲ್ಲಿ ಪರಂಪಾರಗತವಾಗಿ ನೆಲಸಿಕೊಂಡು ಬಂದಿದ್ದಾರೆ. ಇವರು ಮೊಳಕಾಲ್ಮೂರಿನ ಭೈರವನ ಆರಾಧಕರಾಗಿದ್ದಾರೆ. ಇವರು ಮಹಾಭಾರತದ ಅರ್ಜುನನಿಗೆ ಸಂಬಂಧಿಸಿದಂತೆ ಕಾವ್ಯಗಳು, ಕಥೆಗಳು, ಸ್ಥಳೀಯ ಭೈರವ, ದಡ್ಲುಮಾರಮ್ಮ (ಮನೆ ದೇವತೆ), ಗೌರಸಂದ್ರಮಾರಮ್ಮ, ಜಗಲೂರು ಪಾಪನಾಯಕ, ಗಾದ್ರಿಪಾಲನಾಯಕ, ಹಟ್ಟಿತಿಪ್ಪೇಶ, ಚಿಂತಗುಟ್ಲು ಬೋರೆದೇವರು

ಮೊದಲಾದ ಸ್ಥಳೀಯ ದೇವರುಗಳು ಮತ್ತು ಸಾಂಸ್ಕೃತಿಕ ನಾಯಕರನ್ನು ಕುರಿತ ಕಥೆಗಳು, ಕಥನಗೀತೆಗಳು, ಸೋಬಾನೆ ಹಾಡುಗಳು, ವಾಸ್ತವ ಘಟನೆಗಳಿಗೆ ಸಂಬಂಧಿಸಿದ ಹಾಡುಗಳ ರಚನೆ ಹೀಗೆ ಲೌಕಿಕ, ಅಲೌಕಿಕ ಮಾರ್ಗದಲ್ಲಿ ಹಾಡುತ್ತಾ ನಮ್ಮ ಮೌಖಿಕ ಪರಂಪರೆಯ ಪ್ರಚಾರಕರಾಗಿ, ರಾಯಭಾರಿಗಳಾಗಿ, ಸಂವಹನ ಸಂಪರ್ಕ ಸಾಧನಗಳಾಗಿ ಕಾರ್ಯನಿರ್ವಹಿಸುತ್ತಾರೆ.

**ವೃತ್ತಿ ಮೂಲದ ಹಿನ್ನೆಲೆ :**

ವೃತ್ತಿಗಾಯಕ ಸಮುದಾಯವು ಪರಂಪರಾಗತವಾಗಿ ಹಾಡುವುದನ್ನು ವೃತ್ತಿಯನ್ನಾಗಿಸಿಕೊಂಡು ಅರ್ಜುನನು ನಮ್ಮ ಮೂಲಗುರು, ಜೋಗಿಯ ಮೂಲ ಪುರುಷನೆಂದು ಅವನನ್ನು ತಮ್ಮ ಕಾವ್ಯಗಳ ಮುಖ್ಯ ನಾಯಕನನ್ನಾಗಿ ಹಾಡುವುದರ ಮೂಲಕ ತಮ್ಮ ವೃತ್ತಿ ಮೂಲದ ಹಿನ್ನೆಲೆಯನ್ನು ಮಹಾಭಾರತದ ಅರ್ಜುನನೊಂದಿಗೆ ಸೇರಿಕೊಂಡು ಹೇಳುವುದನ್ನು ಇಂದಿಗೂ ಕಾಣಬಹುದು.

ಇವರ ವೃತ್ತಿ ಮೂಲದ ಬಗ್ಗೆ ಅನೇಕ ಕಥೆಗಳನ್ನು ಹೇಳುತ್ತಾರೆ. ಅದರಲ್ಲಿ ಒಂದೆರಡು ಕಥೆಗಳನ್ನು ಸಂಗ್ರಹಿಸಿ ಗುರುತಿಸಲಾಗಿದೆ..

**ಕಥೆ–೧ ಪ್ರಕಾರ :**

ಒಮ್ಮೆ ಅರ್ಜುನನು ಭೂಪ್ರದಕ್ಷಿಣೆ ಮಾಡಿ ತೀರ್ಥಕ್ಷೇತ್ರಗಳನ್ನು ಸುತ್ತಾಡಿ ವಾಪಸ್ಸು ಬಂದಾಗ ತನ್ನ ಜೊತೆಯಲ್ಲಿ ಒಬ್ಬ ಹುಡುಗನನ್ನು ಕರೆದುಕೊಂಡು ಬಂದನು. ಬಹಳ ದಿನಗಳಿಂದ ತಾಯಿಯಿಂದ ದೂರವಾದ ತಾಯಿಯ ವಾತ್ಸಲ್ಯವನ್ನು ಸಂತೋಷಗೊಳಿಸಲು ಜೋಗಿಯ ವೇಷದಲ್ಲಿ ತಾಯಿ ಕುಂತಿ ಬಳಿ ಬಂದು ನಿಂತಾಗ ಇದನ್ನು ನೋಡಿದ ತಾಯಿ ಅರ್ಜುನನ ಹೋಲಿಕೆಯ ಕಿನ್ನರಿಜೋಗಿಯನ್ನು ನೋಡಿ ಅತ್ತಳು. ಆಗ ಅರ್ಜುನನು ನಿಜಸ್ಥಿತಿಯನ್ನು ಹೇಳಿ ತನ್ನ ವೇಷಭೂಷಣಗಳನ್ನು, ಬಿರುದು, ಬಾವಲಿ, ವಾದ್ಯಗಳನ್ನು ತನ್ನ ಜೊತೆಯಲ್ಲಿನ ಬಾಲಕನಿಗೆ ನೀಡಿ ಇನ್ನು ಮುಂದೆ ನನ್ನ ಹೆಸರಿನ 'ಅರ್ಜುನ ಜೋಗಿ'ಗಳೆಂದು ಈ ಭೂಮಿಯ ಮೇಲಿರುವತನಕ ಹಾಡಿಕೊಂಡು ಜೀವಿಸಿ ಎಂದು ಹೇಳಿದನೆಂದು ಅವರು ತಮ್ಮ ವೃತ್ತಿ ಮೂಲದ ಬಗ್ಗೆ ಹೇಳುವರು..

**ಕಥೆ–೨ ಪ್ರಕಾರ :**

"ಒಮ್ಮೆ ಶಿವ ಗಂಗೆಯನ್ನು ಮೆಚ್ಚಿಸಲು ಜೋಗಿಯ ವೇಷದಲ್ಲಿ ಹೋದಾಗ, ಆಗ ಕೋಪಗೊಂಡ ಗಂಗೆಯನ್ನು ಗಮನಿಸಿದ ಶಿವನು ತನ್ನ ನಿಜರೂಪವನ್ನು ತೋರಿಸಿ ತನ್ನ ಬೆವರಿನಿಂದ ಒಬ್ಬ ಜೋಗಿಯನ್ನು ಸೃಷ್ಟಿಸಿ ಅವನಿಗೆ ಕಿನ್ನರಿಯನ್ನು ನೀಡಿ ಭೂಲೋಕದಲ್ಲಿ ಧಾರ್ಮಿಕ ಕಾರ್ಯಗಳನ್ನು ಭಕ್ತರಲ್ಲಿ ಪ್ರಚಾರ ಮಾಡುತ್ತಾ ಜೀವಿಸು" ಎಂದು ಹೇಳುವವರು. ಈ ಹಿನ್ನೆಲೆಯ ಮೂಲಕ ತಾವು ಶಿವನ ಮೂಲದವರೆಂದು ಭೈರವರಾಧನೆ ಆರಾಧಕರೆಂದು ಅವರ ಧಾರ್ಮಿಕಕಾಚರಣೆಯ ಹಿನ್ನೆಲೆಯಲ್ಲಿ ಗುರುತಿಸಿದೆ.

ಇನ್ನೊಂದು ಅಭಿಪ್ರಾಯದ ಪ್ರಕಾರ ಅವರಿಗೆ ಕಿನ್ನರಿ ವಾದ್ಯವನ್ನು ಕೊಟ್ಟವರು "ಜೋಗಿಮಠದ ಸಿದ್ಧರೆಂಬ" ಹೇಳಿಕೆಯನ್ನು ಅವರು ನಡೆದುಕೊಳ್ಳುವ ಮಠಗಳು ಮತ್ತು ಪಂಥಗಳ ಹಿನ್ನೆಲೆ ಗುರುತಿಸಬಹುದು. ಹಾಗೆಯೇ ಇಲ್ಲಿನ ಕಿನ್ನರಿಜೋಗಿಗಳು ಮೊಳಕಾಲ್ಮೂರಿನ ನುಂಕೆ ಮಲೆಸಿದ್ಧೇಶ್ವರನ ಆರಾಧಕರಾಗಿ, ಸಿದ್ಧಪ್ಪ, ಸಿದ್ಧವ್ವ, ಸಿದ್ಧಣ್ಣ, ಸಿದ್ಧಕ್ಕ ಈ ಹೆಸರುಗಳ ಹಿನ್ನೆಲೆಯಲ್ಲಿ ಅವರು ಸಿದ್ಧರ ಮೂಲದ ಹಿನ್ನೆಲೆಯಲ್ಲಿ ತಿಳಿಯಬಹುದು.

ಅವರು ಪಾಂಡವರ ಅರ್ಜುನನ ಕುರಿತು ಹಾಡುವ ಕಾವ್ಯಗಳು, ಕಥೆಗಳ ಹಿನ್ನೆಲೆಯಲ್ಲಿ ತಾವು ಆರಾಧಿಸುವ ಭೈರವನಾರಾಧನೆ ತಮ್ಮ ಮಠಗಳು, ಪಂಥಗಳ ಹಿನ್ನೆಲೆಯಲ್ಲಿ ಈ ಮೂರು ಅಭಿಪ್ರಾಯಗಳು ಅವರ ವೃತ್ತಿ ಮೂಲದ ಬಗ್ಗೆ ಹೆಚ್ಚು ಸಾಮ್ಯತೆ ಹೊಂದಿರುವುದರ ಮೂಲಕ ಬೆಳಕನ್ನು ಚೆಲ್ಲುತ್ತವೆ..

**ಜೋಗಿ ಪದದ ನಿಷ್ಪತ್ತಿ ಮತ್ತು ಮಠಗಳು :**

'ಜೋಗಿ' ಎನ್ನುವ ಪದ ಸಂಸ್ಕೃತದ 'ಯೋಗಿನ್' ಎಂಬ ಪದದಿಂದ ಬಂದಿದ್ದು. ಇದರರ್ಥ ಸನ್ಯಾಸಿ, ಸಿದ್ಧಪುರುಷ, ವೇಷಹಾಕಿದವ ಎಂಬರ್ಥವನ್ನು ಸೂಚಿಸುತ್ತದೆ. ನಾವು ಕನ್ನಡದಲ್ಲಿ ಸಾಮಾನ್ಯವಾಗಿ ಜೋಗಪ್ಪಗಳೆಂದು ಕರೆಯುವುದು ವಾಡಿಕೆ.

**ಆರಾಧನ ಮೂಲ ಮಠಗಳು :**

ಕದ್ರಿ (ಮಂಗಳೂರು), ಆದಿಚುಂಚನಗಿರಿ (ಮಂಡ್ಯ) ಶಾಖಾಮಠಗಳು. ಚಂದ್ರಗುತ್ತಿ (ಸೊರಬ), ಮೊಳಕಾಲ್ಮೂರು (ಚಿತ್ರದುರ್ಗ), ತುರಬೆಗುಡ್ಡ (ಧಾರವಾಡ) ಹಾಗೆಯೇ ಈ ಮಠಗಳ ಪೀಠಾಧಿಪತಿಗಳಾಗಿ ನಾಥಪಂಥಗಳ ಗುರೂಜಿಗಳು ಆಡಳಿತ ನಡೆಸುವರು.

**ಜನಾಂಗದ ಪರಿಚಯ :**

ಇವರಲ್ಲಿ ಕಿನ್ನರಿಜೋಗಿ, ಡಬ್ಬಿಜೋಗಿ, ಎಣ್ಣೆಜೋಗಿ, ಹಂದಿಜೋಗಿ, ಬಳಿಗಾರ ಜೋಗಿ, ಕುಣಬಿ ಜೋಗಿಗಳೆಂದು ಕರೆಯುವ ಸಮುದಾಯಗಳು ಶಿವಮೊಗ್ಗ, ಧಾರವಾಡ, ಬಳ್ಳಾರಿ, ಚಿತ್ರದುರ್ಗ, ಚಿಕ್ಕಮಗಳೂರು, ತುಮಕೂರು ಜಿಲ್ಲೆಗಳಲ್ಲಿ ಹೆಚ್ಚು ಕಂಡುಬರುತ್ತಾರೆ.

**ಕಿನ್ನರಿ ಜೋಗಿಗಳ ಧಾರ್ಮಿಕ, ಸಾಮಾಜಿಕ ಸಂಪ್ರದಾಯ, ಆಚರಣೆಗಳು :**

ಹಾಡುವುದನ್ನು ವೃತ್ತಿಯಾಗಿಸಿಕೊಂಡಿರುವ ಭೈರವನಾರಾಧಕರಾಗಿ ತಮ್ಮ ವೃತ್ತಿಯನ್ನು ಮಾಡುತ್ತಾರೆ. ಇವರು ತಮ್ಮದೆಯಾದ ಆಚಾರ, ವಿಚಾರ, ನಂಬಿಕೆಗಳು, ಪದ್ಧತಿಗಳನ್ನು ಹೊಂದಿರುವುದನ್ನು ಅವರ ಸಂಸ್ಕೃತಿಯ ಹಿನ್ನೆಲೆಯಲ್ಲಿ ಗುರುತಿಸಬಹುದು. ಇವರು ನಾಯಕನಹಟ್ಟಿ ವ್ಯಾಪ್ತಿಯಲ್ಲಿ ಆಚರಿಸುವ ಯುಗಾದಿ, ದೀಪಾವಳಿ, ಮಹಾನವಮಿ, ಗೌರಸಂದ್ರ ಮಾರಮ್ಮನ ಜಾತ್ರೆ, ದಡ್ಲುಮಾರಮ್ಮನ ಜಾತ್ರೆ,

ಹಟ್ಟಿ ತಿಪ್ಪಯ್ಯನ ಜಾತ್ರೆ ಹಾಗೂ ಸ್ಥಳೀಯ ಬುಡಕಟ್ಟು ದೇವರಗಳ, ಧಾರ್ಮಿಕ ಉತ್ಸವಾದಿಗಳಲ್ಲಿ ಭಾಗವಹಿಸುತ್ತಾರೆ. ಹಾಗೆಯೇ ತಾವು ಸಹ ಆಚರಿಸುತ್ತಾರೆ. ಹಾಗೆಯೇ ಇವರು ತಮ್ಮ ಸಂಪ್ರದಾಯದಂತೆ ಕುಟುಂಬದ ಒಬ್ಬರಿಗೆ ಧಾರ್ಮಿಕ ದೀಕ್ಷೆಯನ್ನು ಕೊಡಿಸುವುದು ಇವರ ವೃತ್ತಿ ಪರಂಪರೆಯಾಗಿದೆ.

**ಧಾರ್ಮಿಕ ದೀಕ್ಷೆ :**

ಲೌಕಿಕ ವೃತ್ತಿಗಾಯಕರಾದ ಇವರು ಮೊಳಕಾಲ್ಮೂರಿನ ಭೈರವನ ಹೆಸರಿನಲ್ಲಿ ಅಲ್ಲಿನ ನಾಥಪಂಥದ ಮಠದಲ್ಲಿ ದೀಕ್ಷೆ ಪಡೆಯುವರು. ಇವರು ದೀಕ್ಷೆಯನ್ನು ಕೊಡಿಸುವಾಗ ಇದೊಂದು ಧಾರ್ಮಿಕ ಮತ್ತು ಸಾಮಾಜಿಕ ಆಚರಣೆಯಾಗಿ ಸಂಬಂಧಿಸಿದ ಹುಡುಗನಿಗೆ ಗುರುಮುಖೇನ ಆಯಾ ಧಾರ್ಮಿಕ ಕ್ಷೇತ್ರದಲ್ಲಿ ಕೊಡಿಸುವರು. ಬಡವರಾದವರು ತಮ್ಮ ಊರಿನಲ್ಲಿಯೇ 'ದಾದ, ಆಪಂ'ಗಳೆಂದು ಕರೆಯುವ ಮುಖಂಡರ ಸಮ್ಮುಖದಲ್ಲಿ ದೀಕ್ಷೆ ಪಡೆಯುವರು. ದೀಕ್ಷೆ ನೀಡುವಾಗ ಸಂಬಂಧಿಸಿದ ಹುಡುಗನನ್ನು ಶುದ್ಧಿಗೊಳಿಸಿ, ಗದ್ದುಗೆ ಹಾಕಿಸಿ ಅದರ ಮೇಲೆ ಹಸೆಮಣೆಯ ಮೇಲೆ ಕೂರಿಸಿ ಸೋದರಮಾವನಿಂದ ಕಿವಿಗಳನ್ನು ಚುಚ್ಚಿಸಿ ಅನಂತರ ಕಪಾಲಿ, ಕಾಮಾಕ್ಷಿ, ಕರ್ಣಕುಂಡಲ, ಕುತ್ತಿಗೆಗೆ ಸಿಂಗನಾಥನನ್ನು ಕಟ್ಟಿ ಭೈರವನ ಸಮ್ಮುಖದಲ್ಲಿ ಇಲ್ಲವೆ ಆ ದೇವರ ಹೆಸರಿನಲ್ಲಿ ದೀಕ್ಷೆ ನೀಡಲಾಗುತ್ತಯೀ ಈ ಕಾರ್ಯದಲ್ಲಿ ಬಂಧು-ಬಾಂಧವರು ಹಾಗೂ ಹಿರಿಯ ಮುಖಂಡರು ಹಿರಿಯ ಕಿನ್ನರಿಜೋಗಿಗಳು ಭಾಗವಹಿಸಿ ಸಡಗರದಿಂದ ಕಾರ್ಯವನ್ನು ತಮ್ಮ ಕುಲವೃತ್ತಿ ಹಿನ್ನೆಲೆಯಲ್ಲಿ ಆಚರಿಸುವರು.

ದೀಕ್ಷೆ ನೀಡುವಾಗ ಈ ಕೆಳಕಂಡ ನಿಯಮಗಳನ್ನು ಬೋಧಿಸುವರು "ನೇತ್ರ ನೋಡಬೇಕು, ಆತ್ಮನು ಒಪ್ಪಬೇಕು, ಅಂಥಾದ್ದು ಕಂಡದ್ದು ಕಂಡೆ ಅನ್ನಪ್ಪಾ, ಕಾಣದ್ದಾ ಕಾಣೆ ಅನ್ನಪ್ಪಾ, ಸುಳ್ಳು ಹೇಳಬೇಡ, ಕಳ್ಳತನ ಮಾಡಬೇಡ"[೧೩] ಎಂದು ವೃತ್ತಿನಿಷ್ಠೆಯನ್ನು ಪಾಲಿಸುವಂತೆ ಹೇಳುವರು. ಹಾಗೆಯೇ ಮೆರಣಿಗೆಯಲ್ಲಿ ಆ ಹುಡುಗನನ್ನು ಒಂದಿಷ್ಟು ಮನೆಗಳ ಭಿಕ್ಷಾಟನೆ ಮಾಡಿಸಿ ತಮ್ಮ ವೃತ್ತಿಗೆ ಚಾಲನೆ ನೀಡುವವರು.

**ಸಂಸ್ಕಾರ :**

ಇವರಲ್ಲಿ ಯಾರೆ ಸತ್ತರೂ ಎಲ್ಲ ಕುಲ-ಬಾಂಧವರು ಸೇರಿ ಜೋಗಿಯ ಸಂಪ್ರದಾಯದಂತೆ ಶವಸಂಸ್ಕಾರ ಮಾಡುವರು. ಅನಂತರ ಆ ವ್ಯಕ್ತಿಯ ಕುಟುಂಬದವರು ೩ ದಿನಗಳ ತಿಥಿ (ದಿವಸ), ೧೧, ೧೬ ದಿನಗಳಲ್ಲಿ ದೊಡ್ಡ ತಿಥಿ (ದೊಡ್ಡ ದಿವಸ)ಯನ್ನು ಮಾಡಿ ಸತ್ತ ವ್ಯಕ್ತಿಯ ಕರ್ಮಗಳನ್ನು ತೀರಿಸುವರು. ನಂತರ ಮಹಾಲಯ ಅಮವಾಸೆಯ ಹಬ್ಬದಂದು ಹಿರಿಯರ ಹಬ್ಬವನ್ನು ಆಚರಿಸುವುದರ ಮೂಲಕ ತಮ್ಮ ಪೂರ್ವಿಕರನ್ನು ಪೂಜಿಸುವರು. ಇದು ತಮ್ಮ ಹಿಂದಿನ ಪೂರ್ವಜರನ್ನು ನೆನಪಿಸಿಕೊಳ್ಳುವ ಮತ್ತು ಅವರು ನಮ್ಮೊಂದಿಗಿರುವರೆಂಬ ಭಾವವನ್ನು ಸೂಚಿಸುವುದಾಗಿದೆ.

**ಸಾಮಾಜಿಕ ಸಂಪ್ರದಾಯ :**

ಕಿನ್ನರಿಜೋಗಿಗಳು ತಮ್ಮ ವಿವಾಹ, ಋತುಮತಿ, ಜನನ, ಸೀಮಂತ, ನಾಮಕರಣ ಮೊದಲಾದ ಸಾಮಾಜಿಕ ಆಚರಣೆಗಳಲ್ಲಿ ತಮ್ಮದೆಯಾದ ಸಂಪ್ರದಾಯ ಪದ್ಧತಿಗಳನ್ನು ಅನುಸರಿಸುವರು. ಕಾಣಬಹುದು. ಹಾಗೆಯೇ ಇವರು ವೈವಾಹಿಕ ಸಂಬಂಧವನ್ನು ತಮ್ಮ ಒಳಪಂಗಡಗಳಾದ (ಬೆಡಗುಗಳು) ಬಂಡಾರಿ, ದಳವಾಯಿ, ಗಣಾಚಾರಿ, ಡೋಕಾರಿ, ಸಿಂದ್ಯಾಶ್, ಪಳಬಳಕರ ಮೊದಲಾದ ಒಳ ಪಂಗಡಗಳಲ್ಲಿ ವೈವಾಹಿಕ ಸಂಬಂಧಗಳನ್ನು ಬೆಳೆಸುವರು. ಹಾಗೆಯೇ ತಮ್ಮ ಹೆಣ್ಣುಮಕ್ಕಳು ಋತುಮತಿಯಾದಾಗ ಸೂತಕವೆಂದು ಭಾವಿಸಿ ಅವರನ್ನು ೭, ೯ ದಿನಗಳವರೆಗೂ ಒಂದು ಪ್ರತ್ಯೇಕ ಬೇವಿನ ಅಥವಾ ಹೊಂಗೆಯ ತಪ್ಪಲಿನ ಗುಡಿಸಲಲ್ಲಿ ಕೂರಿಸಿ ಕೊನೆಯ ದಿನ ಮಂಗಳ ಕಾರ್ಯಗಳೊಂದಿಗೆ ಒಳಗೆ ಕರೆದುಕೊಳ್ಳುವರು. ಇವರಲ್ಲಿ ಹೆಣ್ಣುಮಕ್ಕಳು ಹೆರಿಗೆ ಸಮಯದಲ್ಲಿ ಸೂಲಗಿತ್ತಿಯರು ಹೆರಿಗೆ ಮಾಡಿಸುವರು. ಹಾಗೆಯೇ ತಮ್ಮ ಸಮುದಾಯಕ್ಕೆ ಸಂಬಂಧಿಸಿದ ಜಾತ್ರೆ, ಹಬ್ಬ-ಹರಿದಿನಗಳಲ್ಲಿ ಸಾಮೂಹಿಕವಾಗಿ ಭಾಗವಹಿಸಿ ಆಚರಿಸುವುದರ ಮೂಲಕ ಸಹಕಾರ, ಸಹಬಾಳ್ವೆಯನ್ನು ಪ್ರತಿನಿಧಿಸುವರು. ಇವರು ಬಹುತೇಕ ಮಾಂಸಾಹಾರಿಗಳಾಗಿದ್ದರೂ ಸಹ ಸಸ್ಯಾಹಾರವನ್ನು ಸಾಮಾನ್ಯ ದಿನಗಳಲ್ಲಿ ಸೇವಿಸುತ್ತಾರೆ. ಹಾಗೆಯೆ ಉಡುಗೆ-ತೊಡುಗೆಗಳಲ್ಲಿ ವೃತ್ತಿಯ ಸಮಯವನ್ನು ಹೊರತುಪಡಿಸಿ ಉಳಿದ ಸಮಯದಲ್ಲಿ ನಮ್ಮ ಹಿಂದೂ ಸಂಪ್ರದಾಯದ ಸೀರೆ, ಕುಪ್ಪಸ, ಪಂಚೆ, ಅಂಗಿ, ಲುಂಗಿ, ಟವಲು ಧರಿಸುವರು. ಇವರು ತಮ್ಮ ಮೂಲವೃತ್ತಿ ಗಾಯನದ ಜೊತೆಗೆ ಕೃಷಿ, ಪಶುಪಾಲನೆ, ವ್ಯಾಪಾರ, ಕೂಲಿ ಮಾಡುವುದನ್ನು ಹಾಗೂ ಸ್ವಯಂ ಉದ್ಯೋಗಗಳನ್ನು ಮಾಡುವುದರ ಮೂಲಕ ಜೀವಿಸುವರು.

**ವಾದ್ಯ ಪರಿಕರಗಳು :**

ವೃತ್ತಿಗಾಯಕರನ್ನು ಪ್ರತಿನಿಧಿಸುವ ಅಥವಾ ಅವರ ಸಂಪ್ರದಾಯವನ್ನು ಸೂಚಿಸುವ ಮುಖ್ಯ ಸಂಕೇತ ಅವರು ಬಳಸುವ ವಾದ್ಯ ಪರಿಕರಗಳು. ಈ ವಾದ್ಯ ಪರಿಕರಗಳೇ ಆಯಾ ಸಂಪ್ರದಾಯವನ್ನು ಪ್ರತಿನಿಧಿಸುವ ಸಂಕೇತವಾಗಿದೆ.

ಕಿನ್ನರಿಜೋಗಿಗಳ ಮೂಲ ವಾದ್ಯ ಪರಿಕರ 'ಕಿನ್ನರಿ' ಎಂಬ ವಾದ್ಯ. ಇದು ಒಂದು ತಂತಿವಾದ್ಯವಾಗಿದ್ದು, ಇದನ್ನು ಬಿದಿರಿನ ಗಳಕ್ಕೆ ಮೂರು ಸೋರೆ ಬುರುಡೆ, ಬಿದಿರಿನ ಹೊರ ಮೈಮೇಲೆ ಮುಳ್ಳು ಹಂದಿಯ ಚಿಪ್ಪಿನಿಂದ ಮಾಡಿದ ಹತ್ತು ಮೆಟ್ಟಿಲು ಇವುಗಳನ್ನು 'ಸಾರೆ' ಎನ್ನುತ್ತಾರೆ. ಇವುಗಳನ್ನು ಜೇನು ಮೇಣದಿಂದ ಅಂಟಿಸುತ್ತಾರೆ. ಬಿದಿರಿನ ಒಂದು ತುದಿಗೆ ಶೂಲದ ಕಡ್ಡಿಯನ್ನು ಬಂಧಿಸಿ ಸಾರೆಗಳ ಮೇಲಿಂದ ಹಾದು ಬಂದ ತಂತಿಗಳು, ಇನ್ನೊಂದು ತುದಿಯು ಮರದ ಗಿಣಿಯನ್ನು ಸುತ್ತುವರಿಯುತ್ತವೆ. ಹಾಗೆಯೆ ತುದಿಗೆ ನವಿಲುಗರಿಯನ್ನು ಸಿಗಿಸಿ ಅವರ

ಅಂದವನ್ನು ಹೆಚ್ಚಿಸಿಕೊಳ್ಳುವರು. ಹೀಗೆ ಕಿನ್ನರಿ ವಾದ್ಯ ನಮ್ಮ ಜನಪದರಲ್ಲಿ ಮಾಯಾ ಲೋಕವನ್ನು ಸೃಷ್ಟಿಸಿ ಜೋಗಿಗಳ ಹಾಡಿನಲ್ಲಿ ತಲ್ಲಿನರಾಗುವಂತೆ ಮಾಡುವುದು.

**ವೇಷಭೂಷಣಗಳು :**

ವೃತ್ತಿಗಾಯಕರನ್ನು ಅವರು ವೃತ್ತಿ ಸಂದರ್ಭದಲ್ಲಿ ಧರಿಸುವ ಉಡುಗೆ-ತೊಡುಗೆಗಳು, ಬಳಸುವ ವಾದ್ಯಗಳು, ದೇವರ ಲಾಂಛನಗಳು ಮೊದಲಾದವುಗಳಿಂದ ಅವರು ಇಂತಹ ಪ್ರಕಾರದ ವೃತ್ತಿಗಾಯಕರೆಂದು ಗುರುತಿಸಬಹುದು. ಹಾಗೆಯೇ ಜೋಗಿಗಳ ವೇಷಭೂಷಣಗಳನ್ನು ಈ ಕೆಳಕಂಡ ಹಾಡಿನ ಮೂಲಕ ಗುರುತಿಸಲಾಗಿದೆ.

"ಕಣ್ಣು ಉಬ್ಬಿನ ನಡುವೆ ಸಣ್ಣ ವಿಭೂತಿಯ
ಸಣ್ಣ ಸಿಂಗನಾಥ ಕೊರಳಾಗೆ । ಸ್ವಾಮಿಗಳ
ಕರದಲ್ಲಿ ಅಕ್ಷಯದ ಪಾತ್ರೆಯು
ಹಾಲು ಅನ್ನವು ಚೆಂದ ಬಾಗಿಲ ಭೈರವ ಚೆಂದ
ರುದ್ರಾಕ್ಷಿ ಚೆಂದ, ಬಾಗಿಲು ಭೈರವ ಚೆಂದ
ಕರ್ಣಕೆ ಚೆಂದ ಕಾಮಾಕ್ಷಿ"[೧೪]

ಜೋಗಿಗಳು ಧರಿಸುವ ವೇಷಭೂಷಣಗಳನ್ನು ಗುರುತಿಸಲಾಗಿದೆ. ಇವರು ವೃತ್ತಿಯ ಸಂದರ್ಭದಲ್ಲಿ ಧರಿಸುವ ಮುಂಡಾಸು, ೩ ತುರಾಯಿ, ಕೊರಳಲ್ಲಿ ರುದ್ರಾಕ್ಷಿ, ಎದೆಕಾಸಿ, ಸೊಂಟಕಾಸಿ, ಸೀರೆ, ಹಣೆಗೆ, ಕೈಗೆ, ಕಾಲಿಗೆ ವಿಭೂತಿ, ಸಿಂಗನಾಥ, ಪಂಚೆ, ಕಾಲ್ಗೆಜ್ಜೆ, ಕಾಮಾಕ್ಷಿ ಇವರು ಧರಿಸುವ ವಸ್ತ್ರಗಳು.

**ಕಿನ್ನರಿಜೋಗಿಗಳ ಕಥಾಮೇಳ :**

ಇವರ ಭಾಷೆ ಮರಾಠಿಯಾದರೂ ಇವರು ಕನ್ನಡದಲ್ಲಿಯೆ ತಮ್ಮ ಗಾಯನ ಮಾಡುವುದು ಹಾಗೂ ವ್ಯವಹಾರಿಕ ಭಾಷೆಯು ಸಹ ಕನ್ನಡವನ್ನು ಬಳಸುತ್ತಾರೆ.

ಕಿನ್ನರಿಜೋಗಿಗಳು ಲೌಕಿಕ ವರ್ಗದ ಕಥೋಪ ಜೀವಿಗಳಾಗಿದ್ದು, ನಮ್ಮ ಮೌಖಿಕ ಪರಂಪರೆಯ ಹಿನ್ನೆಲೆಯಲ್ಲಿ ತಮ್ಮದೆಯಾದ ಕಂಠಸ್ಥ ರೂಪವನ್ನು ಹಾಡುತ್ತಾ ಒಂದು ಕಿನ್ನರಿ ಲೋಕವನ್ನು ಸೃಷ್ಟಿಸಿ, ಶ್ರೋತೃ ವರ್ಗದವರನ್ನು ಒಂದು ಕ್ಷಣವಾದರೂ ಮೂಕವಿಸ್ಮಿತರಾಗಿ ಅದರಲ್ಲಿ ತಲ್ಲಿನರಾಗುವಂತೆ ಮಾಡುವ ಕಲಾನೈಪುಣ್ಯತೆ ಇವರಲ್ಲಿ ಕಂಡುಬರುವುದು.

ಕಿನ್ನರಿಜೋಗಿಗಳು ತಮ್ಮ ಕಥಾಮೇಳಗಳನ್ನು ರಾತ್ರಿಯ ವೇಳೆಯಲ್ಲಿ ಏರ್ಪಡಿಸುವರು. ರಾತ್ರಿಯ ವೇಳೆಯೆಂದರೆ ಗ್ರಾಮೀಣ ಜನರು ತಮ್ಮ ಕೆಲಸಗಳಿಂದ ಬಿಡುವಿದ್ದು, ಇವರ ಮೇಳಕ್ಕೆ

ಮೊದಲೆ ಊರಿನ ಮುಖಂಡರು ಅಥವಾ ಮೇಳ ನಡೆಯುವ ಜಾಗಕ್ಕೆ ಸಂತೋಷದಿಂದ ಭಾಗವಹಿಸಿ ಅವರ ಮೇಳಕ್ಕೆ ಪ್ರೋತ್ಸಾಹ ನೀಡುತ್ತಾರೆ. ಮೊದಲೆ ನಿರ್ಧರಿಸಿದಂತೆ ಜೋಗಿಗಳು ತಮ್ಮ ಮೇಳತಂಡದಲ್ಲಿ ೨ ರಿಂದ ೪ರವರೆಗೂ ಕಲಾವಿದರ ತಂಡವಿದ್ದು, ಇದರಲ್ಲಿ ಒಬ್ಬನು ಮುಖ್ಯ ಗಾಯಕನಾಗಿ ಕಥೆಯನ್ನು ಹಾಡುತ್ತಾ ನಿರೂಪಿಸುತ್ತಾನೆ. ಉಳಿದವರು ಇವರನಿಗೆ ಹಿಮ್ಮೇಳದವರಿಗೆ ಸೊಲ್ಲನ್ನು ಕೊಡುತ್ತಾ ಕಥೆ ಮುಂದುವರಿಯಲು ಸಹಕಾರಿಯಾಗುತ್ತಾರೆ.

ಇವರು ಮಹಾಭಾರತದ ೧೮ ಪರ್ವಗಳನ್ನು ಕುರಿತು ಒಂದೊಂದು ರಾತ್ರಿ ಹಾಡುವ ಕಥಾವಸ್ತು ಹೊಂದಿರುವರು. ಇವರು ತಮ್ಮ ಕಥಾಮೇಳದಲ್ಲಿ ತಮ್ಮ ದೇವರ ಗಣಸ್ತುತಿಯೊಂದಿಗೆ ಪ್ರಾರಂಭಿಸಿ ಕೊನೆಯಲ್ಲಿ ಮಂಗಳಾರತಿಯೊಂದಿಗೆ ಕಥೆಯನ್ನು ಮುಗಿಸುತ್ತಾರೆ. ಇದು ನಮ್ಮ ಹಿಂದೂ ಸಂಸ್ಕೃತಿಯ ಪಾರಂಪರಿಕ, ಧಾರ್ಮಿಕ ಪದ್ಧತಿಯನ್ನು ಸೂಚಿಸುತ್ತದೆ ಎಂದು ಹೇಳಬಹುದು. ಇವರು ತಮ್ಮ ಕಥೆಯ ನಿರೂಪಣೆಯಲ್ಲಿ ಮಧ್ಯ ಮಧ್ಯ ಪ್ರೇಕ್ಷಕರು ನಿದ್ದೆಗೆ ಜಾರದಂತೆ ಉಪಕಥೆಗಳು, ವಾಸ್ತವಿಕ ಘಟನೆಗಳನ್ನು ಕುರಿತು ಹಾಸ್ಯ ಒಡಪುಗಳನ್ನು ಬಳಸುವುದನ್ನು ಸಹ ಇಲ್ಲಿ ಗುರುತಿಸಬಹುದು. ಹೀಗೆ ಇವರು ಪಾಂಡವರ ಮತ್ತು ವಿಶೇಷವಾಗಿ ಅರ್ಜುನನಿಗೆ ಸಂಬಂಧಿಸಿದ ಕಥೆಗಳನ್ನು ತಮ್ಮ ಕಥಾಮೇಳದಲ್ಲಿ ಹಾಡುತ್ತಾ, ನಿರೂಪಿಸುತ್ತಾ ಲಘು ಕುಣಿತ, ಸಂಗೀತದೊಂದಿಗೆ ಕಥೆಯನ್ನು ನಿರೂಪಿಸುವರು. ನಂತರ ಕಥೆಯ ಕೊನೆಯಲ್ಲಿ ಮಂಗಳ ಹಾಡಿ ಕೊನೆಗೊಳಿಸುವರು. ಬೆಳಿಗ್ಗೆ ಇವರು ಗ್ರಾಮದ ಬೀದಿಗಳಲ್ಲಿ ಮನೆಮನೆಗೆ ಹೋಗಿ ದವಸ-ಧಾನ್ಯಗಳು, ಉಡುಗೊರೆ, ಹಳೆಯ ಬಟ್ಟೆಗಳನ್ನು ಸ್ವೀಕರಿಸುತ್ತಾ ಇವರಿಂದ ಪ್ರೇರೆಪಿತರಾದ ಬೇರೆ ಗ್ರಾಮಗಳ ಮುಖಂಡರ ವೀಳ್ಯೆದ ಆಹ್ವಾನ ಮೆರೆಗೆ ಹೋಗಿ ಕಥಾಮೇಳ ನಡೆಸುತ್ತಾ ತಮ್ಮ ಜೀವನ ನಿರ್ವಹಿಸುವರು. ಸಾಮಾನ್ಯ ದಿನಗಳಲ್ಲಿ ಗ್ರಾಮಗಳಲ್ಲಿ ಭಿಕ್ಷಾಟನೆ ಮಾಡುತ್ತಾ ಪಾಂಡವರ ಕಥೆಗಳನ್ನು ಹಾಡುತ್ತಾ, ಸ್ಥಳೀಯ ದೇವತೆಗಳ ಹೆಸರಿನಲ್ಲಿ ಹರಕೆಯ ಹಾಡನ್ನು ಹೇಳಿ, ಶ್ರೋತೃ ವರ್ಗದಿಂದ ಅಥವಾ ಜನರಿಂದ ದವಸ-ಧಾನ್ಯ ಕಾಣಿಕೆಗಳನ್ನು ಪಡೆದು ಜೀವನ ನಡೆಸುವರು. ಇನ್ನೊಂದು ವಿಶೇಷವೆಂದರೆ ಇವರು ಪ್ರತಿ ಭಾನುವಾರ ತಮ್ಮ ಕುಲದೈವ ವಾರವೆಂದು ಒಂದತ್ತು ಇದ್ದು ನಂತರ ಪೂಜೆ ಮಾಡಿ, ಊಟ ಮಾಡುತ್ತಾರೆ. ಹಾಗೆಯೆ ವರ್ಷಕ್ಕೆ ಒಂದು ಸಲವಾದರೂ ಕಥಾಮೇಳ ನಡೆಸುವುದು ಕಡ್ಡಾಯವೆಂದು ಹೇಳುತ್ತಾರೆ.

**ಕಿನ್ನರಿಜೋಗಿಗಳ ಸಾಹಿತ್ಯ :**

ಮೌಖಿಕ ಪರಂಪರೆಯ ಮಾಹಿತಿ ಕಣಜಗಳಂತೆ ಸಂಸ್ಕೃತಿಯ ಪ್ರಚಾರಕರಾಗಿ, ಸಂಚಾರಿ ಮಾಧ್ಯಮ ಸಂವಹನ ಸಂಪರ್ಕ ಸಾಧನಗಳಾಗಿ ಕಾರ್ಯನಿರ್ವಹಿಸುವ ಕಿನ್ನರಿಜೋಗಿಗಳ ವೃತ್ತಿ ಕಲಾನೈಪುಣ್ಯತೆ 'ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ' ಎನ್ನುವ ದಾಸರ ನಾಣ್ಣುಡಿಯಂತೆ ಅವರ ವೃತ್ತಿ

ಬದುಕಿನ ನಿರ್ವಹಣೆಗಾಗಿಯಾದರೂ ಅವರು ಹಾಡುವ ಕಾವ್ಯ, ಮಹಾಕಾವ್ಯಗಳು, ಹೇಳುವ ಕಥೆಗಳು, ಒಗಟುಗಳು, ಗಾದೆಗಳು ನಮ್ಮ ಮೌಖಿಕ ಸಾಹಿತ್ಯ ಪರಂಪರೆಗೆ ತಮ್ಮದೆಯಾದ ಕೊಡುಗೆಯನ್ನು ನೀಡುವ ಪ್ರಮುಖ ವೃತ್ತಿಗಾಯಕರಲ್ಲಿ ಒಬ್ಬರಾಗಿದ್ದಾರೆಂದು ಹೇಳಿದರೆ ತಪ್ಪೆನಿಲ್ಲ.

ಅವರ ಸಾಹಿತ್ಯದಲ್ಲಿ ನೀತಿ, ಸತ್ಯ, ಧರ್ಮನಿಷ್ಠೆ, ವಿಡಂಬನೆ, ಹಾಸ್ಯ, ಧೈರ್ಯ, ಸಾಹಸ, ವಾಸ್ತವದ ಘಟನೆಗಳು ಕುರಿತ ಮೊದಲಾದ ಅಂಶಗಳನ್ನು ಶೃಂಗಾರರಸ, ವೀರರಸ, ಕರುಣರಸಗಳ ಸಮ್ಮಿಶ್ರಣವನ್ನು ಹಾಡುಗಳಲ್ಲಿ ಕಾಣಬಹುದು.

ಮೂಲತ ಅರ್ಜುನನ ಮೂಲದವರೆಂದು, ಶಿವನ ಆರಾಧಕರೆಂದು ಹೇಳಿಕೊಳ್ಳುವ ಇವರ ಒಂದು ಹಾಡನ್ನು ಗುರುತಿಸಲಾಗಿದೆ.

> "ಹರ ಹರನೆ ಜಯತೊ । ಸಿವಾಸಿವಾ ಮುಕ್ತಿದಾಯಕನೇ ಜಯತೋ
> ಶ್ರೀಗುರುವನೆ ನಿನಗೆ ಜಯತೊ । ಮೂರು ಪುರವನು ಗೆದ್ದವನೆಗೆ
> ಜಯತೊ । ಬಾರೋ ಕಿನ್ನರಿಯ ಮೇಲೆ । ಅರ್ಜುನ ।"[೧೫]

ತಮ್ಮ ವೃತ್ತಿ ಮೂಲದ ಗುರುವಾದ ಅರ್ಜುನನ್ನು ಅವರ ಕಥೆಗಳನ್ನು, ಕಾವ್ಯಗಳನ್ನು ಕಿನ್ನರಿ ಮೇಳದ ಸಂದರ್ಭದಲ್ಲಿ, ಭಿಕ್ಷಾಟನೆಯ ವೇಳೆಯಲ್ಲಿ ಅರ್ಜುನನ ಪ್ರಾರ್ಥನೆಯ ಗಣಸ್ತುತಿಯೊಂದಿಗೆ ಪ್ರಾರಂಭಿಸಿ ಶಿವನನ್ನು ನೆನೆಯುತ್ತಾ ತಾವು ಶಿವನ ಆರಾಧಕರೆಂದು ನೋಡಬಹುದು.

> "ವಾರದ ಜೋಗಿ ಊರಿಗೆ ಬಂದವನೆ
> ವಾರದ ಕಳೆ ಹಿರಿಯಕ । ಜೋಗಿ
> ಹಟ್ಟಿ ತೇರು ಯಾವಾಗ ಹರಿದಾವು
> ತೇರು ಹೋಳಿಯ ಹುಣ್ಣಿಮೆ ದಿನಕೆ । ಅದಾವೆಂದು
> ವಾರದ ಜೋಗಿ ನುಡಿದನು"

ಸಂಚಾರಿ ಸಂವಹನ ಸಂಪರ್ಕ ಮಾಧ್ಯಮಗಳಾಗಿ ಆಯಾ ವರ್ಷದಲ್ಲಿ ನಡೆಯುವ ಜಾತ್ರೆ, ಉತ್ಸವ, ಹಬ್ಬ-ಹರಿದಿನಗಳ ಬಗ್ಗೆ ಮಾಹಿತಿಯನ್ನು ಹೊಂದಿರುತ್ತಿದ್ದರು. ಇವರು ಪ್ರತಿವಾರ ಭಿಕ್ಷಾಟನೆಗೆ ಬರುವಾಗ ಜನಪದರು ಅವರಿಂದ ವರ್ಷದ ಶುಭ ಕಾರ್ಯದ ದಿನಗಳಾವುವು ಎಂಬುದನ್ನು ತಿಳಿದುಕೊಳ್ಳುತ್ತಿದ್ದರು.

**ಹಾರಕೆಯ ಹಾಡು**

> "ಬೋರೆದೇವರಿಗೆ
> ಬೋಮ್ಮೆದೇವರಿಗೆ

ಗೌರಸಂದ್ರ ಮಾರೆಮ್ಮನಿಗೆ

ದಡ್ಲು ಮಾರಮ್ಮನಿಗೆ

ಬೋಸೆದೇವರಿಗೆ

ಹಟ್ಟಿ ತಿಪಯ್ಯಗೆ

ಜಯತು, ಜಯತು, ಜಯತು

ಜಯವಾಗಲಿ"[೧೬]

ಎಂದು ತಮ್ಮ ಭಿಕ್ಷಾಟನೆಯ ಸಂದರ್ಭದಲ್ಲಿ ಆಯಾ ಸ್ಥಳೀಯ ದೇವರುಗಳು, ಕುಲದೇವರುಗಳ ಮೇಲೆ ಹಾರೈಕೆಯನ್ನು ಮಾಡುತ್ತಾ ಜನರಿಂದ ಕಾಣಿಕೆ, ಉಡುಗೊರೆಗಳನ್ನು ಸ್ವೀಕರಿಸುತ್ತಾ ಜೀವನ ನಡೆಸುವರು.

"ಬೈರೂವ ಯಾತಾರಲಮ್ಮವನೆ

ಕಾಸಿಲಿ ಬೆಳೆಯೋ ಕೈ ಸೊರೆ । ಚಿನ್ನದ

ಪಾತ್ರಲಿ ತಾನು ಸಲ್ಲಿಸಾನೆ

ಬೆಳ್ಳಿ ಬೆತ್ತದ ಕೋಲು ಚಿನ್ನದ ತಿರುಸೂಲ

ಚನ್ನಿಗ ಭೈರೂವ ಪಾದಮಾಡಿ । ಬರುವಾಗ

ಕನ್ನೇರಾರುತಿಯಾ ಬೆಳಗಾರೋ"[೧೭]

ಜೋಗಿಗಳು ತಾವು ಭಿಕ್ಷೆ ಬೇಡಲು ಬಂದಾಗ ತಮ್ಮ ಜೊತೆ ತರುವ ಕಿನ್ನರಿ ತ್ರಿಶೂಲ, ಜೋಳಿಗೆ, ಬನಾಸಿ, ಕೋಲು, ಆಕರ್ಷಕ ವೇಷಭೂಷಣಗಳು ಇದೆಲ್ಲಾ ತಮ್ಮ ಕುಲದೈವವಾದ ಶಿವನ ಪ್ರತೀಕವೆಂದು, ಪವಿತ್ರದಾದವುಗಳೆಂದು ಅವರ ಊರಿಗೆ ಬಂದಾಗ ಅಲ್ಲಿನ ಯುವತಿಯರು ಆರತಿ ಬೆಳಗಿ ಸ್ವಾಗತಿಸುತ್ತಿದ್ದಾರೆಂದು ಹೇಳಲಾಗಿದೆ.

"ಆದಡಿಗೆ ಮಾಡುತ್ತಿದ್ದೀ

ಸ್ವಾಮಿ ಬೈರುವನ

ಶಿವಪೂಜೆ ಆಗುವಾಗ

ನಾನೆದ್ದು ನೋಡುತ್ತಿದ್ದೆ"

ಶಿವನ ಆರಾಧಕರಾದ ಇವರು ತಾವು ಎದ್ದಕೂಡಲೆ ಶಿವನನ್ನು, ಅರ್ಜುನನ್ನು ನೆನೆಯುತ್ತಾ ವೃತ್ತಿ ಪ್ರಾರಂಭಿಸುವರು. ಪ್ರತಿ ಭಾನುವಾರ ಇವರು ಒಂದತ್ತು ಇದ್ದು ತಮ್ಮ ದೈವಕ್ಕೆ ಕೃತಾರ್ಥರಾಗುವರು.

ಚೆಲುವಯ್ಯ ಚೆಲವೊ ತಾನಿತಂದನ್ನೊ

ಚಿನ್ಮಯ ರೂಪ ತಂದೆನ್ನಾ ತಾನ

ಬೆಟ್ಟ ಮೇಗಳ ಬೆಳ್ಳಿ ಬಿದಿರು
ಬೇಲಿ ಮ್ಯಾಗಳ ಸೊರೆ ಬುರುಡೆ
ಲೋಲು ಕನ್ನಡಿ ನುಡಿಸೋನ್ಯಾರಯ್ಯ" ॥ಪಲ್ಲವಿ॥

ಜೋಗಿ ತನ್ನದೆಯಾದ ವೇಷಭೂಷಣಗಳಿಂದ ಕಿನ್ನರಿಯ ಮಾಧುರ್ಯ ತುಂಬಿದ ನಾದದಿಂದ ಭಿಕ್ಷಾಟನೆಗೆ ಗ್ರಾಮಗಳಿಗೆ ಬಂದಾಗ ಮಹಿಳೆಯರು ಅವನ ಆಕರ್ಷಕ ರೂಪಕ್ಕೆ, ಹಾಡಿಗೆ ಭಾವ ಪರವಶರಾಗಿ, ಮರುಳಾಗಿ ತಮ್ಮ ಮನೆಗಳಿಗೆ, ಕೇರಿಗಳಿಗೆ ಬಂದು ಹಾಡಿ ಕಾಣಿಕೆಗಳನ್ನು ಪಡೆದು ಹೋಗು ಎಂದು ಹೇಳುತ್ತಾರೆ. ಹೀಗೆ ರಂಗುರಂಗಿನ ವೇಷಭೂಷಣಗಳಿಂದ ಬಿದಿರು ಸೊರೆ ಬುರುಡೆಯಿಂದ ಮಾಡಿದ ಕಿನ್ನರಿಯನ್ನು ಹಿಡಿದು ಜೋಗಿಗಳು ಓಣಿಗಳಲ್ಲಿ ಬಂದರೆ ಅವರ ಹಿಂದೆ ಚಿಕ್ಕಮಕ್ಕಳ ದಂಡೋ ದಂಡೋ. ಹಾಗೆಯೆ ಅವರು ಮನೆಯ ಬಾಗಿಲು ಬಳಿ ಕಿನ್ನರಿ ನುಡಿಸುತ್ತಾ ಹಾಡು ಪ್ರಾರಂಭಿಸಿದರೆ ಅವರ ಮಧುರ ಕಂಠಕ್ಕೆ, ಆಕಷಕ ರೂಪಕ್ಕೆ ಎಂತಹ ಸ್ತ್ರೀಯರು ಸಹ ಮರಳಾಗುತ್ತಾರೆಂಬ ಹಾಡನ್ನು ನಮ್ಮ ಜನಪದರಲ್ಲಿ "ಎಲ್ಲೋ ಜೋಗಪ್ಪ ನಿನ್ನರಮನೆ" ಹಾಡಿನಲ್ಲಿ ಗುರುತಿಸಬಹುದು.

ಇಂದು ಜೋಗಿಗಳು ವಾಸ್ತವ ಘಟನೆಗಳನ್ನು ಕುರಿತು ಹಾಡುವುದನ್ನು ಕಾಣಬಹುದು.

"ಏನು ಮಂತ್ರಿ ಏನು ಮಂತ್ರಣ್ಯ
ಈ ದೇಶದ್ಯಾಗ ಏನು ಮಂತ್ರಿ ಆಗಿ ಹೋದ್ರಣ್ಣ".
"ಎಲ್ಲರೂ ಹತ್ಯಾರಪ್ಪಾ ಸೈಕಲ್ಲು
ಒಳ್ಳೆ ಸೈಕಲ್ಲಾ
ಮನೆಗೆ ಹೋದರಾ ಗಂಜಿನ ಉಪ್ಪಿಲ್ಲ"[೧೯]

ಎಂದು ಪ್ರಜಾಪ್ರಭುತ್ವದ ಬಗ್ಗೆ, ಆಧುನಿಕತೆಯ ಬಗ್ಗೆ ತಮ್ಮ ವಿಡಂಬನೆಯ ಮೂಲಕ ವಾಸ್ತವ ಚಿತ್ರಣವನ್ನು ತಮ್ಮ ಹಾಡಿನ ಮೂಲಕ ಹಾಡುತ್ತಾರೆ. ಹಾಗೆಯೇ ಅನಕ್ಷರತೆ, ಜಾಗತೀಕರಣ, ಧೂಮಪಾನ, ಮಧ್ಯಪಾನ, ಬಡತನ ಬಗ್ಗೆ ಆಯಾ ಸ್ಥಳ, ಸಂದರ್ಭ, ಪರಿಸ್ಥಿತಿಗಳಿಗೆ ತಕ್ಕಂತೆ ಹಾಡು ರಚಿಸಿ ಹಾಡುತ್ತಾ ವಾಸ್ತವದ ಹಲವಾರು ಸಮಸ್ಯೆಗಳ ಬಗ್ಗೆ ಎಚ್ಚರಿಕೆಯನ್ನು ತಮ್ಮ ವೃತ್ತಿಯ ಜೊತೆಗೆ ನಿರ್ವಹಿಸುವರು.

ಮೌಖಿಕ ಪರಂಪರೆಯಲ್ಲಿ ಪ್ರಮುಖವಾಗಿ ಕಂಡುಬರುವ ಈ ವೃತ್ತಿಗಾಯಕರು ನಮ್ಮ ಸಂಸ್ಕೃತಿಯ ಪ್ರಚಾರಕರಾಗಿ, ಸಂಚಾರಿ ಸಂಪರ್ಕ ಸಾಧನಗಳಾಗಿ ನಮ್ಮ ಜನಪದರಲ್ಲಿ ದೈವಿಶ್ರದ್ಧೆ, ನಂಬಿಕೆ, ಭಯ-ಭಕ್ತಿ, ಸೇವೆ, ತ್ಯಾಗ, ಸಹಕಾರ, ಸಹಬಾಳ್ವೆ, ಸೌಹಾರ್ದಯುತತೆ, ಶಾಂತಿ, ಐಕ್ಯತೆ ಭಾವನೆ, ಮನರಂಜನೆ, ಉತ್ಸಾಹ, ಉಲ್ಲಾಸ, ಸದಾ ಚಟುವಟಿಕೆಯಿಂದ ಇರುವಂತೆ ಮಾಡುವುದರ

ಮೂಲಕ ಅವರು ನಮ್ಮ ಮೌಖಿಕ ಪರಂಪರೆಯ ರಕ್ಷಕರಾಗಿ, ಜನರಿಂದ ದವಸ-ಧಾನ್ಯಗಳು, ಉಡುಗೊರೆಗಳನ್ನು ಹಳೆಯ ಬಟ್ಟೆಬರೆಗಳನ್ನು ಪಡೆದುಕೊಂಡು ಇದ್ದುದರಲ್ಲಿ ಜೀವನ ನಡೆಸುವ ಅಲ್ಪತೃಪ್ತರು.

**೩.೫ ದೊಂಬಿದಾಸರು :**

ನಾಯಕನಹಟ್ಟಿಯ ಪರಿಸರ ವ್ಯಾಪ್ತಿಯ ಲೌಕಿಕ ವೃತ್ತಿಗಾಯಕರಲ್ಲಿ ದೊಂಬಿದಾಸರು ಪ್ರಮುಖ ವೃತ್ತಿಗಾಯಕ ವರ್ಗವಾಗಿದೆ. ಹಾಡುವುದನ್ನು ಮುಖ್ಯ ವೃತ್ತಿಯಾಗಿಸಿಕೊಂಡು ವಿಶೇಷ ವೇಷಭೂಷಣ, ವಾದ್ಯ ಪರಿಕರಗಳೊಂದಿಗೆ ಸುದೀರ್ಘ ಕಾವ್ಯಗಳನ್ನು, ವಿಶೇಷ ಮತ್ತು ಸಾಮಾನ್ಯ ಸಂದರ್ಭಗಳಲ್ಲಿ ವಿಷ್ಣುವಿನ ಕೀರ್ತನೆಗಳನ್ನು ಜೊತೆ ಜೊತೆಗೆ ಶೈವ ಪರಂಪರೆಯ ಲೌಖಿಕ ಕಾವ್ಯಗಳನ್ನು ತಮ್ಮ ಪದ್ಯಗಳನ್ನು ಹಾಡಿ ಜೀವಿಸುವ ಇವರನ್ನು ಲೌಕಿಕ ವೃತ್ತಿಗಾಯಕರೆಂದು ಗುರುತಿಸಲಾಗಿದೆ.

ಇವರು ನಮ್ಮ ರಾಜ್ಯಾದಾದ್ಯಂತ ಕಂಡರೂ ಆಯಾ ಪ್ರಾದೇಶಿಕ ಹಿನ್ನೆಲೆಯಲ್ಲಿ ಬೇರೆ ಬೇರೆ ಹೆಸರುಗಳಿಂದ ತಮ್ಮನ್ನು ಗುರುತಿಸಕೊಂಡಿದ್ದಾರೆ. ಅಂದರೆ ದೊಂಬಿದಾಸ, ದೊಂಗದಾಸ, ಕೊಲೆ ಬಸವ, ಗಂಗೆದ್ಲು, ಹೆಣ್ಣು ದಾಸರು, ಶಂಕರ ದಾಸರು, ಚೆನ್ನದಾಸ, ಹೆಣ್ಣು ವೇಷದವರು, ಗೋಪಾಲ ಬುಟ್ಟಿ ದಾಸರು ಎಂದು ಮೊದಲಾದ ಹೆಸರುಗಳಿಂದ ಕರೆಯಲಾಗುತ್ತದೆ.

ಆದರೆ ನಾಯಕನಹಟ್ಟಿ ಪರಿಸರದ ವ್ಯಾಪ್ತಿಯಲ್ಲಿ ಕಂಡುಬರುವ ದೊಂಬಿದಾಸರನ್ನು ಇಲ್ಲಿ ಅಧ್ಯಯನಕ್ಕೆ ಒಳಪಡಿಸಿಕೊಂಡು ಅವರ ಸಾಂಸ್ಕೃತಿಕ, ಮೌಖಿಕ ಪರಂಪರೆಯನ್ನು ಅಧ್ಯಯನ ಮಾಡಿ ಗುರುತಿಸಲಾಗಿದೆ.

**ದೊಂಬಿದಾಸರ ಹಿನ್ನೆಲೆ :**

ಸಂಸ್ಕೃತಿಯ ರಾಯಭಾರಿಗಳಾದ ಇವರ ಮೂಲದ ಬಗ್ಗೆ ಹಲವಾರು ವಿದ್ವಾಂಸರು ತಮ್ಮದೆಯಾದ ಜನಪದ ಮೂಲಗಳಿಂದ ಅಭಿಪ್ರಾಯ ತಿಳಿಸಿದ್ದಾರೆ.

'ದೊಂಬಿ' ಎನ್ನುವ ಪದವು ತೆಲುಗು ಪದದ 'ದೊಮ್ಮಿ' ಎಂಬ ಪದದಿಂದ ಬಂದಿದ್ದು, ಇದರರ್ಥ ಕಾಳಗ, ಜಗಳ, ಗದ್ದಲ, ಗೊಂದಲ ಎಂಬ ಅರ್ಥ ಸೂಚಿಸುತ್ತದೆ.

**ಜನಪದ ಹಿನ್ನೆಲೆ :**

ಇವರು ಬಯಲಾಟದ ಕಲಾವಿದರಾಗಿದ್ದು ತಾವು ಕಲಾಪ್ರದರ್ಶನ ನೀಡುವಾಗ ಒಮ್ಮೆ ಪ್ರೇಕ್ಷಕರ ನಡುವೆ ಗದ್ದಲ ಉಂಟಾಗುತ್ತದೆ. ಮತ್ತೊಂದು ಮೂಲದ ಪ್ರಕಾರ ಪಾತ್ರಧಾರಿಗಳ ನಡುವೆ ಗದ್ದಲ ಏರ್ಪಟ್ಟದ್ದರಿಂದ ದಾಸ ಎನ್ನುವ ಹೆಸರಿನೊಂದಿಗೆ ದೊಂಬಿ, ದೊಮ್ಮಿ ಎನ್ನುವ ತೆಲುಗು ಸೇರಿಕೊಂಡು ದೊಂಬಿದಾಸರೆಂದು ಕರೆಯಲಾಗುತ್ತದೆಂಬ ಅಭಿಪ್ರಾಯವಿದೆ.

"ಅವರು ನಾಟಕದಲ್ಲಿ ಬಳಸುವ ಏಕತಾರಿಯನ್ನು ಬೀದಿಯಲ್ಲಿ ಹಾಡುತ್ತಾ ಭಿಕ್ಷೆ ಬೇಡುವಾಗ ಅವರ ಸಂಗೀತ ಬಹು ಜನರನ್ನು ಆಕರ್ಷಿಸುತ್ತಿದ್ದರಿಂದ ಇವರು ದುಂಬಿಯಂತೆ ಮಧುರವಾಗಿ ಹಾಡುವುದರಿಂದ ಇವರನ್ನು ದುಂಬಿದಾಸರು ಇದು ಕ್ರಮೇಣ ದೊಂಬಿದಾಸರೆಂದು ರೂಢಿತವಾಯಿತೆಂದು ಎಂಬ ಅಭಿಪ್ರಾಯ"[೨೦] ದ ಮೂಲಕ ಅವರ ಹಿನ್ನೆಲೆಯನ್ನು ಹೇಳುವರು.

**ಐತಿಹ್ಯ :**

ಇವರು ತಿರುಪತಿ ತಿಮ್ಮಪ್ಪನ ಆರಾಧಕರಾಗಿರುವುದರಿಂದ ಇವರು ವೈಷ್ಣವ ಪರಂಪರೆಯ ಭಕ್ತರಾಗಿದ್ದು, ತಿರುಪತಿ ವೆಂಕರಮಣ ದೇವಸ್ಥಾನಕ್ಕೆ ಪ್ರತಿವರ್ಷ ಕಾಣಿಕೆ ಸಲ್ಲಿಸುತ್ತಿದ್ದರು. ಆದರೆ ಕಾರಣಾಂತರಗಳಿಂದ ಕಾಣಿಕೆ ಒಪ್ಪಿಸುವುದನ್ನು ಕೈಬಿಟ್ಟಿದ್ದರ ಕಾರಣವಾಗಿ ಇವರನ್ನು ದೊಂಗದಾಸರೆಂದು ಕರೆಯುವುದರ ಮೂಲಕ 'ದೊಂಗ' ಪದ ದೊಂಬಿಯಾಗಿ ಮುಂದೆ ದೊಂಬಿದಾಸವಾಗಿ ಮಾರ್ಪಟ್ಟಿತು ಎಂದು ಗುರುತಿಸಲಾಗಿದೆ.

**ಪುರಾಣ ಮೂಲ :**

"ಒಮ್ಮೆ ಕಾಡಿನಲ್ಲಿ ಗಂಡಸರಿಬ್ಬರು ಹೋಗುತ್ತಿದ್ದಾಗ, ಪಾರ್ವತಿ ಭೂಲೋಕದಲ್ಲಿ ವಿಹಾರರ್ಥವಾಗಿ ಸಂಚರಿಸುವಾಗ ಆಕೆಯನ್ನು ಕಂಡ ಗಂಡಸರಿಬ್ಬರು ತಮ್ಮನ್ನು ಮದುವೆಯಾಗುವಂತೆ ಪೀಡಿಸಿದಾಗ ಇದರಿಂದ ಕುಪಿತಳಾದ ಪಾರ್ವತಿದೇವಿ ಅವರಿಗೆ ನಪುಸಂಕರಾಗಿ ಬಾಳಿ ಎಂದು ಶಾಪವಿತ್ತಾಗ, ಪಶ್ಚಾತಾಪಗೊಂಡ ಅವರು ಶಾಪವಿಮೋಚನೆಯಿಂದ ತಮ್ಮನ್ನು ಬಿಡುಗಡೆಗೊಳಿಸಬೇಕೆಂದಾಗ ಪಾರ್ವತಿ ನೀವು ಹೆಣ್ಣು ವೇಷವನ್ನು ಧರಿಸಿ ಗೀತ ನಾಟಕಗಳನ್ನು ಪ್ರದರ್ಶಿಸುತ್ತಾ ಅದರಿಂದ ಬಂದ ಆದಾಯದಿಂದ ಜೀವಿಸುವುದು ಎಂದು ಹೇಳಿದಳು"

ಹೀಗೆ ಇವರನ್ನು ಹೆಣ್ಣು ವೇಷದವರು ಎಂದು ಕರೆಯುವ ಹಿನ್ನೆಲೆಯು ಈ ಮೇಲಿನ ಅಭಿಪ್ರಾಯವನ್ನು ಪುಷ್ಟಿಕರಿಸುತ್ತದೆ.

ಇವರು ಮೂಲತಃ ನಾಟಕ ಪ್ರದರ್ಶನ ಮಾಡುತ್ತಾ ವೈಷ್ಣವ ಪಂಥದ ಪ್ರಚಾರಕಾಗಿ ಕೀರ್ತನೆಗಳನ್ನು ಹಾಡುತ್ತಾ ತಮ್ಮದೆಯಾದ ವೇಷಭೂಷಣಗಳೊಂದಿಗೆ, ವಾದ್ಯಗಳೊಂದಿಗೆ ವೃತ್ತಿ ಮಾಡಿಕೊಂಡು ಬಂದಿರುವುದನ್ನು ಕಾಣಬಹುದು. ಮೊದಲು ಯಾವುದೇ ಒಂದು ಜಾತಿಗೆ ಸೀಮಿತವಾಗಿರದೆ ಕಾಲನಂತರ ಈ ವೃತ್ತಿಯನ್ನು ಮಾಡುವ ಇವರು ದೊಂಬಿದಾಸರೆಂದು ಗುರುತಿಸಿಕೊಂಡುರುವರು.

**ಧಾರ್ಮಿಕ ಸಂಪ್ರದಾಯ :**

ದೊಂಬಿದಾಸರಲ್ಲಿ ಅನೇಕ ಒಳಪಂಗಡಗಳಿದ್ದರೂ ಸಹ ಇವರೆಲ್ಲಾ ತಿರುಪತಿ ತಿಮ್ಮಪ್ಪನ ಆರಾಧಕರು. ಹಾಗೆಯೇ ಸ್ಥಳೀಯ ದೇವರುಗಳಾದ ಹಟ್ಟಿ ತಿಪ್ಪೇಸ್ವಾಮಿ, ಗೌರಿಸಂದ್ರದ ಮಾರಮ್ಮ,

ಎಲ್ಲಮ್ಮ ಮೊದಲಾದ ಆದಿಶಕ್ತಿಯ ಆರಾಧಕರಾಗಿ ದೇವರುಗಳಿಗೆ ಸಂಬಂಧಿಸಿದ ಜಾತ್ರೆ, ಉತ್ಸವ, ಹಬ್ಬ-ಹರಿದಿನಗಳು ಮೊದಲಾದ ಧಾರ್ಮಿಕೋತ್ಸವಗಳಲ್ಲಿ ಭಾಗವಹಿಸಿ ತಮ್ಮ ಇಷ್ಟಾರ್ಥ ಸೇವೆಯನ್ನು ದೇವರಿಗೆ ಸಲ್ಲಿಸುವರು.

**ಧಾರ್ಮಿಕ ದೀಕ್ಷೆ :**

ಇವರು ಲೌಕಿಕ ವೃತ್ತಿಗಾಯಕರು ಆದರೂ ಕೂಡ ದೀಕ್ಷೆ ಪಡೆಯುವ ಪದ್ಧತಿಯನ್ನು ಇವರಲ್ಲಿ ಕಾಣಬಹುದು. ಇವರಲ್ಲಿ ಮಕ್ಕಳಿಗೆ ಎಂಟನೇಯ ವರ್ಷದಲ್ಲಿ 'ಭಾಗವತಾಚಾರ್ಯರ' ಮೂಲಕ ದೀಕ್ಷೆ ಮುದ್ರೆಯನ್ನು ತಿರುಪತಿ ತಿಮ್ಮಪ್ಪನ ಹೆಸರಿನಲ್ಲಿ ಹಾಕಿಸಿಕೊಂಡು ಶಂಖ, ಚಕ್ರ, ಗರುಡಸ್ತಂಭ ಹಾಗೂ ಜಾಗಟೆಗಳಲ್ಲಿ ಹಿಡಿದುಕೊಂಡು ಭಿಕ್ಷಾಟನೆ ಮಾಡುತ್ತಾ ತಮ್ಮ ಹಾಡಿನ ವೃತ್ತಿಯನ್ನು ನಡೆಸುವರು. ಹಾಗೆಯೆ ಈ ಸಂದರ್ಭದಲ್ಲಿ ಏಕತಾರಿ ದಮ್ಮಡಿಗಳನ್ನು ಹಿಡಿದುಕೊಂಡು ತತ್ವ, ಕಾವ್ಯ, ದೇವರನಾಮಾವಳಿ ಹಾಗೂ ದಾಸರ ಪದಗಳನ್ನು ಹಾಡುತ್ತಾ ಉಪಜೀವಿಸುವರು.

**ಹಬ್ಬ-ಹರಿದಿನಗಳು :**

ಊರೂರು ತಿರಗುತ್ತಾ ಐತಿಹಾಸಿಕ, ಪೌರಾಣಿಕ ಕಥೆಗಳಿಗೆ ಸಂಬಂಧಿಸಿದ ಹಾಡುಗಳನ್ನು ಸಾಮಾಜಿಕ ವಿಷಯಗಳಿಗೆ ಸಂಬಂಧಿಸಿದ ಜನಪದ ಕಾವ್ಯಗಳನ್ನು, ಕಥೆಗಳನ್ನು ಹಾಡುತ್ತಾ ಹಾಗೂ ರಾತ್ರಿಹೊತ್ತು ಬಯಲುಗಳಲ್ಲಿ ನಾಟಕ ಆಡುವ ಆವರು ಆಚರಿಸುವ ಪ್ರಮುಖ ಹಬ್ಬ-ಹರಿದಿನಗಳೆಂದರೆ ದಸರಾ, ಪಿತೃಪಕ್ಷ, ಸಂಕ್ರಾಂತಿ, ಯುಗಾದಿ, ಕಾರಹುಣ್ಣಿಮೆ, ನಾಗರಪಂಚಮಿ, ಗೌರಿಗಣೇಶ, ಹಟ್ಟಿಜಾತ್ರೆ, ದೀಪಾವಳಿ, ಗ್ರಾಮದೇವತೆ, ಕುಲದೇವತೆಗಳ ಹಬ್ಬಗಳು ಅದರಲ್ಲಿ ವಿಶೇಷ ಈ ಭಾಗದಲ್ಲಿನ ಆದಿಶಕ್ತಿಯಾದ ಗೌರಿಸಂದ್ರದ ಮಾರಮ್ಮನ ಹಬ್ಬವನ್ನು ಬಹಳ ಅದ್ದೂರಿಯಾಗಿ ಮಾಡಲಾಗುತ್ತದೆ. ಇವರು ಹಾಗೆಯೇ ತಿರುಪತಿ ವೆಂಕಟರಮಣ ಕ್ಷೇತ್ರಕ್ಕೆ ವರ್ಷಕ್ಕೆ ಒಂದು ಸಲವಾದರು ಹೋಗುವುದರ ಮೂಲಕ ತಮ್ಮ ಸೇವೆಯನ್ನು ದೇವರಿಗೆ ಅರ್ಪಿಸಿ ಕೃತಾರ್ಥರಾಗುತ್ತಾರೆ.

**ಸಾಮಾಜಿಕ ಸಂಪ್ರದಾಯಗಳು :**

ಅಲೆಮಾರಿ ಸಮುದಾಯಗಳಾದ ಇವರು ತಮ್ಮದೆಯಾದ ಆಚರಣೆಗಳು, ಪದ್ಧತಿಗಳು, ಆಚಾರ-ವಿಚಾರಗಳು, ವೇಷಭೂಷಣಗಳು, ಆಹಾರ ಪದ್ಧತಿಗಳನ್ನು ಹೊಂದಿರುವರು. ಇವರ ವೈವಾಹಿಕ ಸಂಬಂಧವು ಅವರ ಬೆಡಗುಗಳಾದ ಗೊಳಮೊಳ್ಳೆ, ದ್ಯಾವರಪಲ್ಲೊಳು, ಮೊಗಸಾಲೊಳ್ಳು, ಪಲ್ಲೇಟೋಳ್ಳು, ಬಟ್ಟೋಳ್ಳು, ಗಂದ್ಯಾಲೊಳ್ಳ, ಸೋಗಲೋಳ ಮೊದಲಾದ ಒಳಪಂಗಡಗಳಲಿ ಮದುವೆಯನ್ನು ಮಾಡುತ್ತಾರೆ. ಇವರು ಸಂಬಂಧಿಸಿದ ನೆಂಟರಾಗುವ ಬೆಡಗುಗಳಲ್ಲಿ ಕನ್ಯೆಯನ್ನು ನೋಡಿ ಬಂದು ಶುಭದಿನಂದು 'ನಿಶ್ಚಿತಾರ್ಥ' (ಮೊದಲಶಾಸ್ತ್ರ) ಮಾಡಿ ಮದುವೆಗೆ ಅಧಿಕೃತ

ಚಾಲನೆ ನೀಡುವರು. ಇವರಲ್ಲಿ 'ತೆರಪದ್ಧತಿ' ವಧುದಕ್ಷಿಣೆ ಆಚರಣೆಯಲ್ಲಿದೆ. ಆದರೆ ಇತ್ತೀಚೆಗೆ ಇದು ಬದಲಾವಣೆ ಆಗಿದೆ. ಅನಂತರ ಮದುವೆಯು ಮೂರು ದಿನಗಳವರೆಗೆ ನಡೆಯುತ್ತದೆ. ಮದುವೆ ಕಾರ್ಯವು ಸಹ ಗಂಡನ ಮನೆಯ ಮುಂದೆ ಎಲ್ಲಾ ಶಾಸ್ತ್ರೋಕ್ತಗಳ ಪ್ರಕಾರ ಅವರಲ್ಲಿಗ ಹಿರಿಯರ ಸಮ್ಮುಖದಲ್ಲಿ ಮದುವೆ ಮಾಡಲಾಗುತ್ತದೆ. ಮದುವೆಯಾದ ಮೂರು ದಿನದಲ್ಲಿ 'ನಾಗವಲ್ಲಿ' ಪೂಜೆ ಮಾಡಿಸುತ್ತಾರೆ. ಇದರರ್ಥ ಗಂಡು, ಹೆಣ್ಣಿಗೆ ಸ್ನಾನಮಾಡಿಸಿ ಮದುವೆ ಬಟ್ಟೆ ಬಿಡಿಸಿ, ಗಂಗೆ ಪೂಜೆ ಮಾಡಿಸಿ ಹೊಸ ಬಟ್ಟೆಗಳೊಂದಿಗೆ ನಡೆಸುವ ಕಾರ್ಯ. ಅನಂತರ ಸೀಮಂತ ಕಾರ್ಯವನ್ನು ಹೆಣ್ಣಿನ ಮನೆಯಲ್ಲಿ ನಡೆಸಲಾಗುತ್ತದೆ. ಹೆರಿಗೆಯನ್ನು ಸೂಲಗಿತ್ತಿಯರ ಸಮ್ಮುಖದಲ್ಲಿ ಮಾಡಿಸಲಾಗುತ್ತದೆ. ಇತ್ತೀಚೆಗೆ ಆಸ್ಪತ್ರೆಗಳಲ್ಲಿ ಮಾಡಿಸಲಾಗುತ್ತದೆ. ಹೆರಿಗೆಯ ನಂತರ ಯಾವುದೇ ರೋಗಗಳು ಬರದಂತೆ ಬಾಣಂತಿಯರಿಗೆ ಗೊತ್ತುಪಡಿಸಿದ ನಾಟಿಗಿಡಮೂಲಿಕೆಗಳ ಔಷಧಿಗಳನ್ನು ಕಷಾಯಮಾಡಿ ಕುಡಿಯುತ್ತಾರೆ. ನಂತರ ಮಗುವಿನ ನಾಮಕರಣ ೫, ೭, ೯ ತಿಂಗಳುಗಳಲ್ಲಿ ಇಡುತ್ತಾರೆ.

ಹೆಣ್ಣುಮಕ್ಕಳು ಋತುಮತಿಯಾದಾಗ ಅವರಿಗೆ ಗುಡ್ಲುಹಾಕಿ ೫, ೭, ದಿನಗಳವರೆಗೂ ಕೂರಿಸಿ ಅನಂತರ ತಮ್ಮದೆಯಾದ ಕುಲಪದ್ಧತಿಯ ಪ್ರಕಾರ ಮನೆ ತುಂಬಿಸಿಕೊಳ್ಳವರು. ಇವರು ಮಾಮೂಲಿಯಾದ ಸೀರೆ, ಕುಪ್ಪಸ, ಲಂಗ-ದಾವಣಿ, ಅಂಗಿ, ಪಂಚೆ, ನಿಕ್ಕರ, ಬನಿನ್ ಇತ್ತಿಚೆಗೆ ಪ್ಯಾಂಟ್, ಟೀಶರ್ಟ್‌ಗಳನ್ನು ಧರಿಸುತ್ತಾರೆ. ಇವರು ಹೆಚ್ಚಾಗಿ ಮಾಂಸಹಾರಿಗಳಾಗಿದ್ದು, ಕೌಜುಗ, ಕಾಡುಬೆಕ್ಕು, ಬಿಳಿಇಲಿ, ಮೊಲ, ಕಾಡುಹಂದಿ ಮೊದಲಾದ ಪ್ರಾಣಿಗಳನ್ನು ಬೇಟೆಯಾಡುವುದರ ಮೂಲಕ ತಿನ್ನುತ್ತಾರೆ. ಹಾಗೆಯೇ ಸೇಂದಿ, ಸಾರಾಯಿ, ಧೂಮಪಾನ ದಾಸ್ಯತೆಗೆ ಒಳಗಾಗಿದ್ದಾರೆ. ಇವರಲ್ಲಿ ಯಾರಾದರೂ ಸತ್ತರೂ ಎಲ್ಲರೂ ಭಾಗವಹಿಸಿ ಶವಸಂಸ್ಕಾರ ಮಾಡುವರು. ಹಾಗೆಯೆ ಸತ್ತ ವ್ಯಕ್ತಿಯ ಹಿರಿಯ ಅಥವಾ ಕಿರಿಯ ಮಗನು ತಂದೆಯ 'ಪಿಂಡಾಕೂಡು (ಕರ್ಮ) ಮಾಡುವುದರ ಮೂಲಕ ಮೂರು ದಿನಗಳ ನಂತರ ನಡೆಯುವ ದಿವಸದಲ್ಲಿ ತಮ್ಮ ದೇವರಿಗೆ, ಬೆಡಗಿಗೆ ಸಂಬಂಧಿಸಿದವರು ಮಾತ್ರ ಪಾಲ್ಗೊಳ್ಳುತ್ತಾರೆ. ನಂತರ ದೊಡ್ಡ ದಿವಸ (ತಿಥಿ)ದಲ್ಲಿ ನೆಂಟರಿಷ್ಟರು ಭಾಗವಹಿಸುತ್ತಾರೆ. ಹಾಗೆಯೇ ವರ್ಷಕ್ಕೊಮ್ಮೆ ಇವರಲ್ಲಿ ಮಾರ್ನಮಿ ಹಬ್ಬದಲ್ಲಿ ಹಿರಿಯರ ಪುಣ್ಯತಿಥಿಯನ್ನು ಮಾಡುತ್ತಾ ಅವರು ಹಿರಿಯರನ್ನು ಅಂದು ನೆನೆಸುತ್ತಾ ಕಿರಿಯ ಪೀಳಿಗೆಗೆ ಇದನ್ನು ವರ್ಗಾಯಿಸುತ್ತಾರೆ.

**ದೊಂಬಿದಾಸರ ಮೇಳ ಪ್ರದರ್ಶನ :**

ಅಲೆಮಾರಿ ಸಮುದಾಯದವರಾದ ಇವರು ಸಮೃದ್ಧಿ, ಮಳೆ, ಬೆಳೆಯಾದ ಪ್ರದೇಶಗಳ ಕಡೆ ವಲಸೆ ಬಂದು ಹಾಗೂ ತಮ್ಮ ಹಾಡುಗಳಿಗೆ, ಕಲೆಗೆ ಪ್ರೋತ್ಸಾಹ ನೀಡುವ ನೆಲೆಗಳ ಕಡೆಗೆ ಬಂದು ತಮ್ಮ ವಾಸ್ತವ್ಯ ಹೂಡುವರು. ಇವರು ಇಲ್ಲಿ ತಾತ್ಕಾಲಿಕ ಗುಡಾರಗಳನ್ನು ನಿರ್ಮಿಸಿಕೊಳ್ಳುವವರು.

ಒಂದು ವೇಳೆ ಇಲ್ಲಿ ಅನುಕೂಲವಾದರೆ ಇಲ್ಲಿ ವಾಸಿಸುವುದರ ಮೂಲಕ ಇದನ್ನು ಮೂಲನೆಲೆಯನ್ನಾಗಿ ಮಾಡಿಕೊಂಡು ಸುತ್ತಮುತ್ತಲಿನ ಪ್ರದೇಶಗಳಿಗೆ ವಲಸೆ ಹೋಗಿ ತಮ್ಮ ವೃತ್ತಿ ಪ್ರದರ್ಶನ ಏರ್ಪಡಿಸಿ ಪುನಃ ವಾಪಸ್ಸು ಬರುವರು.

ಆಯಾಯ ಗ್ರಾಮಗಳ ಮುಖಂಡರಿಂದ ವೀಳ್ಯವನ್ನು (ಆಹ್ವಾನ) ಪಡೆದು ಇವರು ಗೊತ್ತುಪಡಿಸಿದ ದಿನದಿಂದ ಕಲಾಪ್ರದರ್ಶನಗಳನ್ನು ಏರ್ಪಡಿಸುತ್ತಾರೆ. ಆಗ ಕಲಾಪ್ರದರ್ಶನ ನಡೆಯುವುದನ್ನು ಮುಂಚಿತವಾಗಿ ಊರಿನ ಮುಖಂಡರು ಡಂಗುರ ಬಾರಿಸುತ್ತಾರೆ. ಅದರಂತೆ ಅಂದು ಸಂಜೆ ಊರಿನ ಜನತೆಯೆಲ್ಲಾ ತಮ್ಮ ಕೆಲಸ ಕಾರ್ಯಗಳನ್ನು ಮುಗಿಸಿ, ಉಂಡು–ತಿಂದು ತಮ್ಮ ಕುಟುಂಬ ಪರಿವಾರ ಸಮೇತ ನಾಟಕದ ವೇದಿಕೆ ಹಾಕಿರುವ ವಿಶೇಷವಾಗಿ ದೇವಸ್ಥಾನ, ಜಗಲಿ, ಶಾಲೆ ಬಯಲು, ಊರು ಬಾಗಿಲು ಬಳಿ ಇಲ್ಲವೆ ಕಟ್ಟೆಗಳ ಮೇಲೆ ವೇದಿಕೆಯನ್ನು ನಿರ್ಮಿಸುವರು. ಜನತೆ ಬಂದು ನೆರೆದ ನಂತರ ಇವರು ತಮ್ಮ ವಾದ್ಯ ಪರಿಕರಗಳೊಂದಿಗೆ ಮೊದಲೆ ವೇಷಭೂಷಣಗಳೊಂದಿಗೆ ಅಲಂಕೃತವಾಗಿ ಸಿದ್ಧಗೊಂಡ ಇವರು ಗಂಗೆಗೌರಿ, ಮಾರೇಗೌಡ, ಬಾಲನಾಗಮ್ಮ, ಕೃಷ್ಣ, ಕೊರವಂಜಿ, ಬಂಜೆಹೊನ್ನಮ್ಮ, ಶ್ರೀಕೃಷ್ಣ ಪಾರಿಜಾತ, ಲಾವಣಿಗಳು ಮೊದಲಾದ ಪೌರಾಣಿಕ, ಜನಪದ ನಾಟಕಗಳನ್ನು ಆಡುತ್ತಾ ಪ್ರೇಕ್ಷಕರನ್ನ ಅದರಲ್ಲಿ ತಲ್ಲೀನಗೊಳಿಸುವುದರ ಮೂಲಕ ಅವರಲ್ಲಿ ನ್ಯಾಯ, ನೀತಿ, ಸತ್ಯ, ಧರ್ಮ, ಶ್ರದ್ಧೆ, ಸಹಕಾರ, ಸೌಹಾರ್ದತೆ ಮೊದಲಾದ ಉತ್ತಮ ಗುಣಗಳನ್ನು ಬೆಳೆಸಿಕೊಳ್ಳುವಂತೆ ಮಾನಸಿಕ, ದೈಹಿಕ ಚಟುವಟಿಕೆಗಳಿಂದ ವಿಶ್ರಾಂತಿ ಪಡೆಯಲು ಮನರಂಜನೆಯನ್ನು ನೀಡುವುದರ ಮೂಲಕ ಇವರು ಸಂಚಾರಿ ಸಂವಹನ ಮಾಧ್ಯಮಗಳಾಗಿ, ಮನೋಚಿಕಿತ್ಸಕರಾಗಿ, ಸಮಾಜ ಸುಧಾರಕರಾಗಿ ಕಾರ್ಯನಿರ್ವಹಿಸುವರು. ಹೀಗೆ ಇವರ ಕಲಾಪ್ರದರ್ಶನವನ್ನು ಮೆಚ್ಚಿಕೊಂಡು ಸುತ್ತಮುತ್ತಲಿನ ಗ್ರಾಮಗಳ ಮುಖಂಡರು 'ವೀಳ್ಯೆ' ಕೊಟ್ಟು ಅವರ ಕಲೆಗೆ, ವೃತ್ತಿಗೆ ಪ್ರೋತ್ಸಾಹ ಕೊಟ್ಟು ಹುರಿದುಂಬಿಸುವರು. ನಂತರ ಬೆಳಿಗ್ಗೆ ಎದ್ದು ಇವರು ಊರಲ್ಲಿ ಭಿಕ್ಷಾಟನೆಗೆ ಹೋದಾಗ ಇವರ ಕಥೆಗಳಿಂದ, ಅಂಗಿಕ ಅಭಿನಯ, ಕುಣಿತ, ಹಾಡುಗಳಿಗೆ ಮನಸೋತು ಗ್ರಾಮೀಣ ಜನತೆ ದವಸ–ಧಾನ್ಯ, ಇಂತಿಷ್ಟು ಹಣ ಹಾಗೂ ಊರಿನ ಗೌಡ್ರು, ಶಾನಭೋಗರು ಇವರ ವೃತ್ತಿಸೇವೆ ಮೆಚ್ಚಿ ಉಡುಗೊರೆಗಳನ್ನು ಕೊಟ್ಟು ಅವರನ್ನು ಪ್ರೀತಿಯಿಂದ ಬೀಳ್ಕೊಡುವರು. ಹೀಗೆ ಇವರು ಗ್ರಾಮಗಳಲ್ಲಿ ತಮ್ಮದೆಯಾದ ಕುಟುಂಬ ಸದಸ್ಯರೊಂದಿಗೆ ಮೇಳ ಪ್ರದರ್ಶನವನ್ನು ನೀಡುತ್ತಾ ತಮ್ಮ ಜೀವನದ ರಥವನ್ನು ಸಾಗಿಸುತ್ತಾರೆಂಬುದನ್ನು ಗುರುತಿಸಬಹುದು.

**ವಾದ್ಯ ಪರಿಕರಗಳು :**



ದೊಂಬಿದಾಸರು ತಮ್ಮ ವೃತ್ತಿ ಸಂದರ್ಭದಲ್ಲಿ ಏಕತಾರಿ, ಕಡ್ಡಿ ತಂಬೂರಿ, ಚಿಟಕಿ, ದಮ್ಮಡಿ, ತಾಳ, ತಬಲ, ಗೆಜ್ಜೆ ಮೊದಲು ವಾದ್ಯಪರಿಕರಗಳನ್ನು ಬಳಸುತ್ತಾರೆ.

**ವೇಷಭೂಷಣಗಳು :**

ಇವರು ಸಾಮಾನ್ಯ ಸಂದರ್ಭದಲ್ಲಿ ವಿಶೇಷ ವಸ್ತ್ರಗಳನ್ನು ಧರಿಸುವುದಿಲ್ಲ. ಆದರೆ ಕಲಾಪ್ರದರ್ಶನ ಸಮಯದಲ್ಲಿ ಅಂಗಿ, ದೋತಿ, ಕೋಟು, ತಲೆಗೆ ಪೇಟ, ಹಣೆಯಲ್ಲಿ ಒಂಟಿನಾಮ, ಕೊರಳಲ್ಲಿ ಮುತ್ತಿನ ಸರ, ತುಳಸಿ ಮಾಲೆ, ಬಲಗೈಲಿ ಏಕವಾರಿ, ಎಡಗೈಲಿ ಚಿಟಕಿ, ಜೋಳಿಗೆ ಹಾಕಿಕೊಂಡಿರುತ್ತಾರೆ.

**ದೊಂಬಿದಾಸರ ಸಾಹಿತ್ಯ :**

ನಿರಕ್ಷರಿಗಳಾದ ದೊಂಬಿದಾಸರು ತಮ್ಮ ಸಾಹಿತ್ಯವನ್ನು ಮೌಕಿಕ ಪರಂಪರೆಯಿಂದಲೆ ತಾವು ಕಲಿತಿರುವುದು ಎಂದು ಹೇಳುತ್ತಾರೆ. ಲೌಕಿಕ ವೃತ್ತಿಗಾಯಕರಾದ ಇವರ ತಮ್ಮ ಗಾಯನ, ನಾಟಕ ಪ್ರದರ್ಶನ ಸಂದರ್ಭದಲ್ಲಿ ಕಾವ್ಯಗಳನ್ನು, ದಾಸರ ಕೀರ್ತನೆಗಳನ್ನು, ಲಾವಣಿಗಳನ್ನು, ಒಗಟು, ಒಡಪು, ಗಾದೆಗಳು, ಕಥೆಗಳು, ಕಾವ್ಯಗಳನ್ನು, ದಾಸರ ಕೀರ್ತನೆಗಳನ್ನು ಬಳಸಿ ಹಾಡುವುದನ್ನು ಅವರ ಸಾಹಿತ್ಯದ ಹಿನ್ನೆಲೆಯಲ್ಲಿ ಗುರುತಿಸಬಹುದು. ಇವರು ಮಾತೃಭಾಷೆ ತೆಲುಗು ಆದರೆ ಕನ್ನಡದಲ್ಲಿ ಬಹಳ ಸೊಗಸಾಗಿ ಹಾಡುತ್ತಾರೆ.

ಅವರು ಪ್ರದರ್ಶಿಸುವ ಪ್ರಮುಖ ಕಥೆಗಳೆಂದರೆ ಶ್ರೀಗೌರಿ ಮದುವೆ, ಗಂಗೇಗೌರಿ ಜಗಳ, ಕೃಷ್ಣ ಪಾರಿಜಾತ, ಶ್ರೀಕೃಷ್ಣ, ಕೊರವಂಜಿ ಹಾಗೂ ಪ್ರಮುಖ ಬಯಲಾಟಗಳೆಂದರೆ ಸತ್ಯಹರಿಶ್ಚಂದ್ರ, ಶಿವ ಮಹಾತ್ಮೆ, ನಳ ಚರಿತ್ರೆ, ರೇಣುಕ ಎಲ್ಲಮ್ಮನ ಕಥೆ, ಭೂ ಕೈಲಾಸ, ಕಂಸವಧೆ, ಗರಿಜಾ ಕಲ್ಯಾಣ, ಕರಿಭಂಟನ ಕಾಳಗ.

**ಲಾವಣಿಗಳು :**

ಇವು ಮಾನವನ ವಾಸ್ತವತೆಯ ಬದುಕಿನ ಏಳು–ಬೀಳುಗಳನ್ನು ಕುರಿತು ಜೀವನ ಅನುಭವ ಕಲ್ಪನಾ ಶಕ್ತಿ, ಆಲೋಚನಾ ಶಕ್ತಿಯಿಂದ ರಚಿತವಾದ ಸಾಹಿತ್ಯ ದೊಂಬಿದಾಸರು ಹಾಡುವ ಪ್ರಮುಖ ಲಾವಣಿಗಳನ್ನು ಗುರುತಿಸಲಾಗಿದೆ.

**ಅತ್ತೆ–ಸೊಸೆ :**

"ಅತ್ತೆ ಮೇಲೆ ಸೊಸೆ ತಿರುಗಿ ಬಿದ್ದರೆ
ಮೋಕ್ಷದ ದಾರಿ ಅವಳಗಿಲ್ಲ
ಮಾಡಿದವಳುಂಬುತಾಳೆ
ಮಾಡಿದಂಥ ಕಡುಬ
ಇದು ಏನು ಸುಳ್ಳಲ್ಲ"[೨೧]

ಈ ಲಾವಣಿ "ಉಪ್ಪು ತಿಂದವನು ನೀರು ಕುಡಿಯಲೇ ಬೇಕು" ಗಾದೆಯ ಅರ್ಥವನ್ನು ಸೂಚಿಸುತ್ತದೆ. ತಪ್ಪು ಮಾಡಿದವನಿಗೆ ಶಿಕ್ಷೆ ತಪ್ಪಿದ್ದಲ್ಲ. ಹಾಗೆಯೇ ಸೊಸೆಯಿಂದ ಕಿರುಕಳಕ್ಕೆ ಒಳಗಾದ ಅತ್ತೆ ದೈವ ಕೃಪೆಯಿಂದ ಬದುಕಿ ಬರುವುದರ ಜೊತೆಗೆ ಹಣವನ್ನು ತನಗೆ ನೀರಲ್ಲಿ ಸಿಕ್ಕಿದೆ ಎಂದು ಹೇಳುವುದರ ಮೂಲಕ ಧನದ ವ್ಯಾಮೋಹಕ್ಕೆ ಒಳಗಾದ ಸೊಸೆ ಹೊಳೆಯ ನೀರಿಗೆ ಹಾರುವುದರ ಮೂಲಕ ಸಾವನ್ನಪ್ಪುತ್ತಾಳೆ. ಹೀಗೆ ಇದು ನೀತಿಯ ಸಂದೇಶ ಸಾರುತ್ತದೆ.

ಮಾರೇಗೌಡ ಅಥವಾ ಕೋಣವೇ ಗೌಡನ ಲಾವಣಿ

"ಕಾಸಿಯ ಪುರಿಯ ಪಟ್ಟಣದಲ್ಲಿ
ನೀಟುಗಾರ ಮಾರೇಗೌಡ
ಮಾರೇಗೌಡ್ನ ಮನೆಯೆಂಬೊದು
ಹ್ಯಾಗಿರುವುದೋ ಕಂಡಿಲ್ಲ ನೀವು
ಚಿನ್ನದ ಕಳಸ, ಬೆಳ್ಳಿಯ ಕಳಸ
ಮತ್ತೆ ಕಳಸದ ಎತ್ತಿನ ಗೌಡ"[೨೨]

ತಿಂದಿದ್ದು ತನಗೆ ಬಚ್ಚಿಟ್ಟಿದ್ದು ಪರರಿಗೆ ಎಂಬಂತೆ ಜಿಪುಣತನದ, ದುಡ್ಡಿನ ವ್ಯಾಮೋಹದ ಬಗ್ಗೆ ಈ ಲಾವಣಿ ತಿಳಿಸುತ್ತದೆ. ಹಾಗೆಯೇ ಹರಿದಾಸರ ಧನ ಮೋಹದ ಕೀರ್ತನೆಗಳನ್ನು ನೆನಪಿಸುತ್ತದೆ.

**ಬಂಜೆ ಹೊನ್ನಮ್ಮ**

"ಕುಂಟನಾದರೂ ಆಗಲಿ ಶಿವನೆ
ಕುರುಡನಾದರೂ ಆಗಲಿ ಶಿವನೆ
ಇವತ್ತಾದರೂ ಹುಟ್ಟಲಿ ಮಗ
ನಾಳೆ ಬೆಳಿಗ್ಗೆ ಸಾಯಲಿ ಮಗ
ಬಂಜೆ ಎಂಬೋ ಸೊಲ್ಲು ಶಿವನೆ
ಹೋದರೆ ಸಾಕಲ್ಲ ಶಿವನೆ"[೨೩]

ಸಮಾಜದಲ್ಲಿ ಬಂಜೆಯಾದರೆ ಜನರಿಂದ ಅನಾದರಣೆಗೆ, ನಿರ್ಲಕ್ಷಕ್ಕೆ ಒಳಗಾಗುವ ಮಹಿಳೆಯ ಮನಸ್ಸಿಗೆ ತುಮುಲ, ತಳಮಳ, ಮಕ್ಕಳ ಪ್ರಾಪ್ತಿಗಾಗಿ ದೇವರಲ್ಲಿ ಹರಕೆ ಹೊತ್ತುವುದನ್ನು ಇಲ್ಲಿ ಗುರುತಿಸಲಾಗಿದೆ.

**ಗಾದೆ, ಒಗಟು, ಒಡಪು :**

ಮೌಖಿಕ ಪರಪಂರೆಯಲ್ಲಿ ಗಾದೆ, ಒಗಟು, ಒಡಪು, ಸಾಹಿತ್ಯ ಪ್ರಕಾರಗಳು ಮಾನವನ ಜೀವನಾನುಭವದ ನೆನಪಿನ ಬುತ್ತಿಗಳೆಂದು ಹೇಳಬಹುದು. ಹೀಗೆ ಮಾನವನು ಸಮಾಜದಲ್ಲಿ

ವ್ಯವಹರಿಸುವಾಗ, ವೃತ್ತಿ ಮಾಡುವಾಗ ಮಾತನಾಡುವಾಗ ಸಂದರ್ಭೋಚಿತವಾಗಿ ಇವು ಬರುತ್ತವೆ. ಹೀಗೆ ದೊಂಬಿದಾಸರು ತಮ್ಮ ವೃತ್ತಿ ಪರಂಪರೆಯಲ್ಲಿ ಕಥೆಗಳು, ಕಾವ್ಯಗಳು, ಲಾವಣಿಗಳು ಹಾಡುವ ಹಾಗೂ ಕಲಾಮೇಳ ನಡೆಸುವ ಸಂದರ್ಭಗಳಲ್ಲಿ ಇವುಗಳನ್ನು ಸಂದರ್ಭೋಚಿತವಾಗಿ ಬಳಸುವುದರ ಮೂಲಕ ಹಾಡಿಗೆ, ನಿರೂಪಣೆಗೆ ಒಂದು ಕಳೆಯನ್ನು ಕೊಡುವುದರ ಮೂಲಕ ಶ್ರೋತೃ ವರ್ಗವನ್ನು ಕುತೂಹಲದಿಂದ ನೋಡುವಂತೆ, ಕೇಳುವಂತೆ ಮಾಡುವರು. ಅಂತಹ ಪ್ರಮುಖ ಗಾದೆಗಳು, ಒಗಟುಗಳು, ಒಡಪುಗಳನ್ನು ಗುರುತಿಸಲಾಗಿದೆ.

* ಕಾಡಿನಲ್ಲಿ ಹುಟ್ಟುತ್ತದೆ, ಕಾಡಿನಲ್ಲಿ ಬೆಳೆಯುತ್ತದೆ, ಹೆಂಗಸರ ಮುಂದೆ ಕುಣಿಯೋದು ನಾನು ಯಾರು? **ಉತ್ತರ : ಒನಕೆ**

* ಎಲೆಯಿಲ್ಲದ ಮರದಡಿಯಲ್ಲಿ, ಮೊಲೆಯಿಲ್ಲದವಳು ನಿಂತಿದ್ದಳು, ಗಂಡು ಅಲ್ಲದವನು ಹೋಗಿ ಮುಟ್ಟಿದ ಕಣ್ಣು ಇಲ್ಲದ ಮಗು ಹುಟ್ಟಿತು ನಾನು ಯಾರು? **ಉತ್ತರ : ಕೋಳಿ, ಹುಂಜ, ಮೊಟ್ಟೆ**

*. ಹಗಲೆಲ್ಲ ಹಾಳು ತೋಟ, ಇರುಳೆಲ್ಲಾ ನಿನ್ನ ತೋಟ, ಪೂಜಾರಿ ದೇವರಿಗೆ ಮುಡಿಸೋದಿಲ್ಲ. **ಉತ್ತರ : ನಕ್ಷತ್ರ**

ದಾಸರು ಹಾಡುವ ಗಂಗೆ-ಗೌರಿ ಜಗಳದಲ್ಲಿ ಅವರಿಬ್ಬರ ನಡುವೆ ನಡೆಯುವ ಜಗಳಲ್ಲಿ ವಾದ-ವಿವಾದದಲ್ಲಿ ಹಲವಾರು ಸನ್ನಿವೇಶಗಳಲ್ಲಿ ಒಬ್ಬರಿಗೊಬ್ಬರು ಪ್ರಶ್ನೆ ಹಾಕಿಕೊಂಡು ಒಡುಪು, ಗಾದೆ, ಒಗಟುಗಳನ್ನು ಬಳಸುತ್ತಾ ಸಂಭಾಷಣೆ ನಡೆಸುವ ಸನ್ನಿವೇಶಗಳ ಆಯ್ದ ಸ್ವಲ್ಪ ಭಾಗವನ್ನು ಗುರುತಿಸಲಾಗಿದೆ.

**ಗೌರಿ :** ಅಟ್ಟ ಅರಳಿ ತುಪ್ಪ ಸೋರೆದು ಕಾಯಿ ಮೇಲೆ ಮುಳ್ಳಂಟು ಕಾಣೆ. ನನ್ನ ಸವತಿ ಮೇಲೆ ಮುಳ್ಳುಂಟು ಹಲಸಿನ ಕಾಯಲ್ಲ ನಾರಿ ಕಂಡಿದ್ದಾರೆ ಒಡಿದೇಳು.

**ಗಂಗೆ :** ಬಲ್ಲೇನು ಬಾವಾಕಿ ಎಲ್ಲನು ಹೇಳೇನು ಸಣ್ಣವಳಲ್ಲ ಕಾಣೆ ನನ್ನ ಸವತಿ ಚಿಕ್ಕೊಳು ಅಲ್ಲ ಕಾಣೆ, ಚಿಕ್ಕೊಳು ತಾನಾದ್ರೆ ತಿಳಿದುಕೊಳ್ಳೆ ಮತ್ತೆ ಕರಳು ತಾನಲ್ಲವೇನೆ.

**ಗೌರಿ :** ಅಂಗಂತ ಅರಚೋದು ಹೊಲದಂಚು ಮೇಯೋದು ಗುಂಬದಲಿ ಹಾಲ ಕರೆಯೋದು ಗೌರಿ ಕಂಡಿದ್ದಾರೆ ಬಡಿದೇಳು

**ಗಂಗೆ :** ಬಲ್ಲೇನು ಬಾವಾಕಿ ಎಲ್ಲನು ಹೇಳೇನು ಸಣ್ಣವಳಲ್ಲ ಕಾಣೆ ನನಸವತಿ ಆದರೆ ತಿಳಿದುಕೊಳ್ಳ ಕಬ್ಬಿನ ಹಾಲಲ್ಲವೆ.

**ಗೌರಿ :** ಒಣೀಲಿ ಉಟ್ಟುವುದು ಒಣೀಯಲಿ ಬೆಳೆಯುವುದು ಹೋಗುವವರ ಸೆರಗ ಹಿಡಿಯುವುದು ಈ ಕತೆ ನಾರಿ ಕಂಡಿದ್ದರೆ ಓಡಿದೇಳಿ.

**ಗಂಗೆ :** ಬಲ್ಲೇನು ಬಾವಾಕಿ ಎಲ್ಲನು ಹೇಳೇನು ಸಣ್ಣವಳಲ್ಲ ಕಾಣೆ ನನಸವತಿ ಆದರೆ ತಿಳಿದುಕೊಳ್ಳ

ಉತ್ತರಾಣಿ ಕಡ್ಡಿಯಲ್ಲವೆ”[೨೪]

ಹೀಗೆ ಒಬ್ಬರಿಗೊಬ್ಬರು ಜವಾಬ್, ಸವಾಲ್ ರೀತಿಯಲ್ಲಿ ಒಡುಪುಗಳನ್ನು ಹೇಳುತ್ತಾ ಬುದ್ದಿಗೆ ಕಸರತ್ತು, ತಾರ್ಕಿಕತೆ, ಆಲೋಚನ ಶಕ್ತಿಯ ಸಾಮರ್ಥ್ಯವನ್ನು ಹಾಗೂ ಜೀವನದ ವಾಸ್ತವದ ಹಿನ್ನೆಲೆಯನ್ನು ಇವರ ಸಾಹಿತ್ಯದಲ್ಲಿ ನೋಡಬಹುದು.

ದೊಂಬಿದಾಸರು ತಮ್ಮ ತತ್ವಪದಗಳು, ಕೀರ್ತನೆಗಳು, ಲಾವಣಿಗಳು, ರಾಮಾಯಣ, ಮಹಾಭಾರತದ ಕಥಾವಸ್ತುವುಳ್ಳ ನಾಟಕಗಳು, ಐತಿಹಾಸಿಕ ವೀರರ ಸಂಗತಿಗಳ ಕಥನ ಕಾವ್ಯಗಳು, ವಾಸ್ತವ ಜೀವನದ ಲೋಕಾನುಭವದ ಗಾದೆಗಳು, ಒಡಪುಗಳನ್ನು ಅವರು ಇಂದಿಗೂ ಮೌಖಿಕ ಪರಂಪರೆಯನ್ನು ಅವಲಂಬಿಸಿರುವುದನ್ನು ಕಾಣಬಹುದು.

“ಎಲ್ಲಿಂದ ಬಂದ್ಯವ್ವ ಜಾಣೆ, ಜಗದ ಇಸ್ಪೇಟ್ ರಾಣೀ ।
ಐವತ್ತೆರಡು ಎಲೆ ಎಕ್ಕಾ
ಲೆಕ್ಕ ಇಲ್ಲದಾಂಗ ಹೋಗುತಾವ ರೊಕ್ಕ !
ಚಲೋ ಹಾಕಿದೆವ್ವ ಜನರಿಗೆ ಚಕ್ಕ” [೨೫]

ಎಂದು ಜನರು ತಮ್ಮ ದುಶ್ಚಟಗಳಿಂದ ಪ್ರಸ್ತುತ ಹೇಗೆ ಹಾಳಾಗುವುದದರ ಜೊತೆಗೆ ತಮ್ಮ ಸಂಸಾರವನ್ನು, ಕುಟುಂಬದ ಅವನತಿಗೆ ಕಾರಣವಾಗುತ್ತದೆಯೆಂದು ಪ್ರಸ್ತುತ ಪರಿಸ್ಥಿತಿಗಳು, ಸಮಸ್ಯೆಗಳು ಕುರಿತು ಹಾಡು ರಚಿಸಿ ಸಂದರ್ಭಕ್ಕೆ ತಕ್ಕಂತೆ ಹಾಡುವರು.

**೩.೬. ಸುಡಗಾಡುಸಿದ್ಧರು :**

ನಮ್ಮ ರಾಜ್ಯದಲ್ಲಿ ಹಾಗೂ ನಾಯಕನಹಟ್ಟಿ ವ್ಯಾಪ್ತಿಯಲ್ಲಿ ವಾಸಿಸುತ್ತಿರುವ ವಿಶಿಷ್ಟ ಬುಡಕಟ್ಟಿನ ಅಲೆಮಾರಿ ವೃತ್ತಿಗಾಯಕರಲ್ಲಿ ಸುಡಗಾಡುಸಿದ್ಧರು ಒಂದು ಸಮುದಾಯ. ವಿಶೇಷ ಸಂಸ್ಕೃತಿ, ಪರಂಪರೆಯನ್ನು ಈ ಜನಾಂಗ ಹೊಂದುವುದರ ಮೂಲಕ ಇಂದಿಗೂ ನಾಗರಿಕ ಜಗತ್ತಿನಿಂದ ತನ್ನ ಪ್ರತ್ಯೇಕತೆಯನ್ನು ಉಳಿಸಿಕೊಂಡಿದೆ.

ಸುಡಗಾಡು ಎಂದರೆ ‘ಹೆಣಗಳನ್ನು ಹೂಳುವ ಸ್ಥಳ’, ಸಿದ್ಧರೆಂದರೆ ತನ್ನ ಬಯಕೆಯ ವಸ್ತುವನ್ನು ಈಡೆರಿಸಿಕೊಳ್ಳುವನು ಎಂದರ್ಥ. ಒಂದು ಕಾಲದಲ್ಲಿ ಸ್ಮಶಾನದ ಒಡೆಯರಾದ ಸುಗಾಡುಸಿದ್ಧರು ಶಿವನಾನುಗ್ರಹದಿಂದ ಜನಿಸಿದವರೆಂದು ತಮ್ಮ ಮೂಲದ ಬಗ್ಗೆ ಹೇಳಿಕೊಳ್ಳುವರು. ಅಲೆಮಾರಿ ಸಮುದಾಯವಾದ ಸುಡಗಾಡುಸಿದ್ಧರು ಇಂದು ಭಿಕ್ಷಾಟನೆ ಮೂಲವೃತ್ತಿಯಾಗಿ ತಮ್ಮ ವಂಶಪಾರಂಪರ್ಯವಾಗಿ ಕಲಿತ ಯಕ್ಷಿಣಿ, ಮಾಟ, ಮೋಡಿ ಹಾಗೂ ಸ್ಥಳೀಯ ದೇವತೆಗಳ

ಮೇಲಿನ ಕಾವ್ಯರಚನೆ ಮತ್ತು ಶಿವ, ಕೃಷ್ಣ, ರಾಮ, ಪಾರ್ವತಿಯ ಕುರಿತು ಹಾಡುಗಳನ್ನು ಹಾಡುತ್ತ ತಮ್ಮ ಹೊಟ್ಟೆಯಹೊರೆದುಕೊಳ್ಳುವೆ. ಇವರು ನಮ್ಮ ರಾಜ್ಯದಾದ್ಯಂತ ಕಂಡುಬರುವರು.

ಸಿದ್ಧರ ಮೂಲದ ಬಗ್ಗೆ ಅವರಲ್ಲಿ ಪ್ರಚಲಿತವಾಗಿರುವ ಜಾನಪದ ಐತಿಹ್ಯಗಳು, ಪೌರಾಣಿಕ ಹಿನ್ನೆಲೆ ಪ್ರಮುಖ ಆಧಾರಗಳಾಗಿವೆ. ಅದರಲ್ಲಿ ಒಂದನ್ನು ಗುರುತಿಸಿದೆ.

'ಶಿವನು ತಪಸ್ಸನ್ನಾಚರಿಸಿದಾಗ ಆ ಕಾರ್ಯಕ್ಕಾಗಿ ಪಾರ್ವತಿ ನವಕೋಟಿ ಸಿದ್ಧರನ್ನು ಸೃಷ್ಟಿಸಿ, ಕಾರ್ಯ ಮುಗಿದ ನಂತರ ವಿಭೂತಿ, ಕಾವಿ, ಕಮಂಡಲ, ರುದ್ರಾಕ್ಷಿ, ಶಿವಗಂಟೆಯನ್ನು ಕೊಟ್ಟು ಭೂಲೋಕಕ್ಕೆ ಕಳುಹಿಸಿದಳೆಂದು ಇವರು ತಮ್ಮ ಮೂಲದ ಬಗ್ಗೆ ಹೇಳುವರು.

**ಧಾರ್ಮಿಕ ಸಂಪ್ರದಾಯಗಳು :**

ಇವರು ನಾವು ಸುಡಗಾಡಿನಲ್ಲಿ ಜನಿಸಿದ್ದರ ಹಿನ್ನೆಲೆಯ ಮೂಲಕ ತಮ್ಮ ಕುಲದೇವರು ರೇವಣಸಿದ್ಧ, ಶ್ರೀಶೈಲ ಮಲ್ಲಿಕಾರ್ಜುನನ ಆರಾಧಕರಾಗಿರುವರು. ಹಾಗೆಯೆ ಸ್ಥಳೀಯ ದೇವರುಗಳಾದ ಎಲ್ಲಮ್ಮ, ತಿಪ್ಪೇಸ್ವಾಮಿ, ಜಗಲೂರು ಪಾಪನಾಯಕ, ಜುಂಜಪ್ಪನ ಆರಾಧಕರಾಗಿರುವರು. ಇಲ್ಲಿ ನಡೆಯುವ ಹಟ್ಟಿಜಾತ್ರೆ ಮತ್ತು ಗೌರಿಸಂದ್ರ ಮಾರಮ್ಮನ ಜಾತ್ರೆಗಳಲ್ಲಿ ತಮ್ಮ ಹರಕೆಗಳನ್ನು ತೀರಿಸುವರು. ಹಾಗೆಯೆ ತಮ್ಮ ಇಷ್ಟಾರ್ಥ ದೇವರುಗಳ ಕೃಪೆಗೆ ಪಾತ್ರರಾಗಲು ತಮ್ಮ ಮಕ್ಕಳಿಗೆ ಮಾರಮ್ಮ, ತಿಪ್ಪಯ್ಯ, ತಿಪ್ಪಕ್ಕ, ಸಿದ್ಧಪ್ಪ, ಸಿದ್ಧಮ್ಮ, ಮಲ್ಲಯ್ಯ, ಮಲ್ಲಮ್ಮ, ಮಾರಮ್ಮ ಎಂಬ ಹೆಸರುಗಳನ್ನು ಇಡುವುದರ ಮೂಲಕ ಅವರು ಆಚರಿಸುವ ದೈವದ ಹಿನ್ನೆಲೆಯಲ್ಲಿ ನೋಡಬಹುದು.

ಹಾಗೆಯೇ ಇವರು ಹಟ್ಟಿಜಾತ್ರೆ, ಯುಗಾದಿ, ದಸರಾ, ದೀಪಾವಳಿ, ಹಂಪಿಹುಣ್ಣಿಮೆ, ಕಾರಹುಣ್ಣಿಮೆ, ನಾಗರಪಂಚಮಿ, ಗೌರಸಂದ್ರಮಾರಮ್ಮನಜಾತ್ರೆ ಮೊದಲಾದ ಹಬ್ಬಗಳನ್ನು ಆಚರಿಸುವರು. ಹಾಗೂ ತಮ್ಮ ವೃತ್ತಿ ಸಮಯದಲ್ಲಿ ಈ ದೇವರುಗಳ ಹಿನ್ನೆಲೆಯಲ್ಲಿ ಹಾಡುಗಾರಿಕೆ ಮಾಡುತ್ತ ಬದುಕುವರು.

**ಸಾಮಾಜಿಕ ಸಂಪ್ರದಾಯಗಳು :**

ಇವರಲ್ಲಿ ತಮ್ಮದೆ ಆದ ಆಚಾರ-ವಿಚಾರ, ನಂಬಿಕೆಗಳು, ಆಹಾರ ಪದ್ಧತಿಗಳು, ಉಡುಗೆ-ತೊಡಿಗೆಗಳು, ರೂಢಿ-ಸಂಪ್ರದಾಯಗಳು ಹೊಂದಿರುವರು. ಇವರಲ್ಲಿ ವೈವಾಹಿಕ ಸಂಬಂಧವು ತಮ್ಮ ಬೆಡಗುಗಳಾದ ಪುಲಿಯೊರು, ಬಟಕಳೊರು, ಎನಮಲೊರು, ಪಡ್ಲೆಟರವರು ಮೊದಲಾದವರ ಮಧ್ಯ ಸಂಬಂಧಗಳನ್ನು ಬೆಳೆಸುತ್ತಾರೆ. ಇವರು ನಾಮಕರಣ, ಜವಳ ತೆಗೆಸುವುದು ಈ ಕಾರ್ಯಗಳನ್ನು ದೈವದ ಹಿನ್ನೆಲೆಯಲ್ಲಿ ಆಚರಿಸುವರು. ಋತುಮತಿಯಾದ ಹೆಣ್ಣುಮಕ್ಕಳನ್ನು ಸೂತಕವೆಂದು ಭಾವಿಸಿ ಅವರನ್ನು ಶುದ್ಧಗೊಳಿಸಿ ಮನೆತುಂಬಿಸಿಕೊಳ್ಳುವರು. ಇವರು ತಮ್ಮದೆ ಜಾತಿ ಪಂಚಾಯತಿ

ಹೊಂದಿರವರು. ಇವರು ಹೆಚ್ಚು ಮಾಂಸಹಾರಿಗಳಾಗಿರುವುದು ಇವರ ಬೇಟೆಯ ಹಿನ್ನೆಲೆಯಲ್ಲಿ ಗುರುತಿಸಿದೆ.

**ಕಥಾಮೇಳ ಪ್ರದರ್ಶನ ವಿಧಾನ :**

ಲೌಕಿಕ ವೃತ್ತಿಗಾಯಕರಾದ ಇವರು ರಾಮಾಯಣ, ಮಹಾಭಾರತ, ಪುರಾಣ, ಕಾವ್ಯಗಳ ಕುರಿತು, ಹಾಗೂ ಸ್ಥಳೀಯ ದೇವರಗಳ ಕುರಿತು ದೀರ್ಘವಾದ ಕಾವ್ಯ, ಕಥೆ ತಮ್ಮ ಹಾಡಿನ ಮೂಲಕ ಹೇಳುವರು. ಇವರು ತಮ್ಮ ಕೈಚಳಕದ ಮೋಡಿ ಇಂದಿಗೂ ತನ್ನದೆ ಆದ ವೈಶಿಷ್ಟ್ಯತೆಯನ್ನು ಉಳಿಸಿಕೊಂಡಿದೆ. ಇವರು ತಮ್ಮ ಭಿಕ್ಷಾಟನೆ ಸಂದರ್ಭದಲ್ಲಿ ನಾಟಿವೈದ್ಯರಾಗಿ, ಭವಿಷ್ಯಕಾರರಾಗಿ ನಮ್ಮ ಜನಪದರ ನಂಬಿಕೆಗಳಿಗೆ, ಸಮಸ್ಯೆಗಳಿಗೆ ಪರಿಹಾರ, ಸಲಹೆ ಸೂಚನೆಗಳನ್ನು ನೀಡುವರು. ಇವರು ತಮ್ಮ ಕೈಚಳಕದ ಮೋಡಿ ಪ್ರದರ್ಶನವನ್ನು ಊರಿನ ಬೀದಿಯಲ್ಲಿ ಏರ್ಪಡಿಸುತ್ತಾರೆ. ತಮ್ಮ ಮೋಡಿ ಪ್ರದರ್ಶನದ ಪ್ರಾರಂಭಕ್ಕೆ ಮುನ್ನ ತಮ್ಮ ಕುಲದೈವವನ್ನು ಸ್ಮರಿಸುವವರು. ಅವರ ಮೋಡಿ ಸಂದರ್ಭದಲ್ಲಿನ ಒಂದು ಹಾಡನ್ನು ಇಲ್ಲಿ ಕಾಣಬಹುದು.

ಅಜೆಜೆಜೆ ಆಯ್ಯ
ಮೊಸಳೆಯಾಟ ನೀರಾಗಂತ
ಗೌಡ್ರ ಆಟ ಗಡಗ್ಯಾಗಂತ
ಹಾವಿನ ಆಟ ಹುತ್ತ್ಯಾಗಂತ
ಮಂಗನ ಆಟ ಗಿಡದಾಗಂತ
ಸಿದ್ಧರ ಆಟ ಜೋಳಗ್ಯಾಗಂತ
ಹತ್ ಗರ್ ಗರ್ ಗರ್ ಗರ್
ಇವೆಲ್ಲ ನಿಜಾ ಆಗಿದ್ರೆ
ನಾವೆಲ್ಲಾ ಇಲ್ಯಾಕೆ ಬರ್ತಿದ್ವಿ
ಎಲ್ಲಾ ಖಾಲಿ ನೋಡಾಕೊಂದು ಚಮತ್ಕಾರ
ಆಗಾಟ ಭೋಗಾಟ ಒಂದಿನದ ಲಗಾಟ[೨೬]

ತಮ್ಮ ಪ್ರಸಬದ್ಧವಾಗಿ ಹಾಡುವುದರ ಮೂಲಕ ಒಂದು ವಸ್ತುವನ್ನು ಇನ್ನೊಂದು ವಸ್ತುವಿಗೆ ಹೋಲಿಕೆ ಮಾಡುತ್ತಾ ನೆರೆದ ಜನರನ್ನು ತಮ್ಮ ಆಟದಲ್ಲಿ ಮಗ್ನರಾಗಿ ಮಾಡುವರು. ಹಾಗೆಯೆ ಈ ಇದು ಅವರ ಬದುಕಿನ ವಾಸ್ತವತೆಯನ್ನು ತಿಳಿಸುತ್ತದೆ.

ಇವರು ಸಾಮಾನ್ಯ ಸಂದರ್ಭದಲ್ಲಿ ರಾಮಾಯಣ, ಮಹಾಭಾರತ, ಐತಿಹಾಸಿಕ ಹಾಗೂ ಸ್ಥಳೀಯ ದೇವರುಗಳ ಮೇಲೆ ಹಾಡುಗಳನ್ನು ಹಾಡುವುದರ ಮೂಲಕ ಜನರಿಂದ ತಮ್ಮ ಸೇವೆಗೆ

ಅವರ ಆತ್ಮತೃಪ್ತಿಯಿಂದ ಕೊಟ್ಟಷ್ಟು ದವಸ-ಧಾನ್ಯ, ಹಳೆ ಬಟ್ಟೆಬರೆಗಳನ್ನು ಸ್ವೀಕರಿಸುತ್ತಾ ಬದುಕನ್ನು ನಿರ್ವಹಿಸುವ ಅಲ್ಪತೃಪ್ತರು.

**ವೇಷಭೂಷಣಗಳು :**

ಇವರು ತಮ್ಮ ವೃತ್ತಿಗನುಗುಣವಾಗಿ ಕಾವಿಕಪನಿ, ಕೊರಳಿನ ಘಂಟೆ, ರುದ್ರಾಕ್ಷಿಮಾಲೆ, ಕರ್ಣಕುಂಡಲ, ಕುಂಕುಮ, ವಿಭೂತಿ, ಕೈಬೆರಳುಗಳಿಗೆ ಉಂಗುರುಗಳು, ಕೊರಳಿಗೆ ಮಣಿಸರಗಳು, ಕಾವಡಿ ದಿಬ್ಬ ಜೋಳಿಗೆ, ಕಪಾಲಿಕೆ ಮೊದಲಾದವು ಇವರ ವೃತ್ತಿಜೀವನದಲ್ಲಿ ಧರಿಸುವ ಪ್ರಮುಖ ವಸ್ತ್ರಪರಿಕರಗಳು.

**ಸಾಹಿತ್ಯ :**

ಸುಡಗಾಡುಸಿದ್ಧರು ಮೌಖಿಕ ಸಾಹಿತ್ಯವನ್ನು ಅವಲಂಬಿಸಿರುವರು. ಇವರು ಸಾಮಾನ್ಯವಾಗಿ ತಮ್ಮ ಮೋಡಿಪ್ರದರ್ಶನದ ಸಮಯದಲ್ಲಿ ಹಾಗೂ ಕಥಾಮೇಳದ ಸಂದರ್ಭದಲ್ಲಿ ಒಡಪು, ಒಗಟು, ಹಾಸ್ಯಗೀತೆಗಳು, ಸ್ಥಳೀಯ ದೈವಗಳು, ಐತಿಹಾಸಿಕ, ಸಾಂಸ್ಕೃತಿಕ ನಾಯಕರ ಕುರಿತು ಕಾವ್ಯ, ಕಥನಗೀತೆಗಳನ್ನು ಹಾಡುವರು. ಇವರು ಮೋಡಿ ಸಂದರ್ಭದಲ್ಲಿ ಸ್ವರಚಿತ, ಪ್ರಾಸಬದ್ಧ ಹಾಡುಗಳನ್ನು ಗಮನಿಸಿದರೆ ಅವರ ಕಲ್ಪನಾಶಕ್ತಿ, ಕಲಾನೈಪುಣ್ಯತೆ, ಸೃಜಶೀಲತೆ ಕಾಣಬಹುದು. ಇವರ ದೈವದ ಹಾಡನ್ನು ಇಲ್ಲಿ ಗುರುತಿಸಿದೆ.

ಓಂ ಜಯ
ಕಾಶಿವಿಶ್ವನಾಥ
ಉಜ್ಜನಿಯ ಮರಳುಸಿದ್ಧೇಶ್ವರ
ಶ್ರೀಶೈಲ ಮಲ್ಲಿಕಾರ್ಜುನ
ಓಂ ಪರಮಶಿವನೆ ಹಟ್ಟಿತಿಪ್ಪೇಶ
ಪರಿಹರಿಸು ಎನ್ನ ಬವಬಂಧನ
ಪರಶಿವನೆ ತಿಪ್ಪೇಶನೆ ನರನಯ್ಯ ನಾನು
ಏನೇನೂ ಅರಿಯನು
ಪರಿಹರಿಸು ಎನ್ನ ಬವಬಂಧನ
ಮಂಗಲಂ ಜಯ ಮಂಗಲಂ

ಈ ಹಾಡಿನ ಹಿನ್ನೆಲೆಯು ತಮ್ಮ ಜೀವನಕ್ಕೆ ದೈವದ ಕೃಪೆ ಇರುವವರೆಗೆ ಯಾವುದೇ ತೊಂದರೆ ಇರುವುದಿಲ್ಲ. ದೈವವೊಂದೆ ಎಲ್ಲದಕ್ಕೂ ಕಾರಣ ಎಂಬ ಭಾವನೆ ಅವರಲ್ಲಿದೆ. ತಮ್ಮ ಜೀವನ ನಿರ್ವಹಣೆಗಾಗಿ ಹಾಡು, ಕಥೆ ಮೋಡಿಹಾಕುತ್ತಾ ಮೌಖಿಕ ಪರಂಪರೆಯನ್ನು ಉಳಿಸಿ-ಬೆಳೆಸುವಲ್ಲಿ ಸುಡಗಾಡುಸಿದ್ಧರ ವೃತ್ತಿಜೀವನ ಅನನ್ಯ.

## ಕೊನೆಯ ಟಿಪ್ಪಣಿಗಳು

೧. ಚೇತನಕುಮಾರ ಆರ್., ಬಳ್ಳಾರಿ ಜಿಲ್ಲೆಯ ಜನಪದ ವೃತ್ತಿಗಾಯಕರು, ಪು-೧೮
೨. ಜೀ.ಶಂ. ಪರಮಶಿವಯ್ಯ, ದಕ್ಷಿಣ ಕರ್ನಾಟಕದ ಜನಪದ ಕಾವ್ಯ ಪ್ರಕಾರಗಳು, ಪು-೯
೩. ಚೇತನಕುಮಾರ ಆರ್., ಬಳ್ಳಾರಿ ಜಿಲ್ಲೆಯ ಜನಪದ ವೃತ್ತಿಗಾಯಕರು, ಪು-೩೧
೪. ಚಂದ್ರಪ್ಪ ಎನ್., ಎಲ್ಲಮ್ಮ ಒಂದು ಜಾನಪದೀಯ ಅಧ್ಯಯನ, ಪು-೧೧೮
೫. ಚೇತನಕುಮಾರ ಆರ್., ಬಳ್ಳಾರಿ ಜಿಲ್ಲೆಯ ಜನಪದ ವೃತ್ತಿಗಾಯಕರು, ಪು-೮೫
೬. ಒಂಕಾರನಾಯ್ಕ ಎಚ್., ಚಂದ್ರಗುತ್ತಿ ಕ್ಷೇತ್ರದ ಸಾಂಸ್ಕೃತಿಕ ಸಂಕಥನ, ಪು-೨೪೭
೭. ಅದೇ ಕೃತಿ ಪು-೧೮೨
೮. ಅದೇ ಕೃತಿ ಪು-೧೮೫
೯. ಚಂದ್ರಪ್ಪ ಎನ್., ಎಲ್ಲಮ್ಮ ಒಂದು ಜಾನಪದೀಯ ಅಧ್ಯಯನ, ಪು-೧೦೦
೧೦. ವೀರಣ್ಣ ದಂಡೆ, ಶ್ರೀಪಾದ ಶೆಟ್ಟಿ (ಸಂ), ಸುವರ್ಣ ಜಾನಪದ ಲೇಖನಗಳು ಪು-೪೫೯
೧೧. ಅದೇ ಕೃತಿ ಪು-೪೯೫
೧೨. ಹಾಡಿದವರು ಚೌಡಿಕೆ ಓಬಮ್ಮ/ಗಂಡ. ದಾಸರ ಓಬಯ್ಯ, ಬೋಸದೇವರಹಟ್ಟಿ
೧೩. ಹಿ.ಚಿ. ಬೋರಲಿಂಗಯ್ಯ, ದಾಸಪ್ಪ ಜೋಗಪ್ಪ ಪು-೧೪೭
೧೪. ಅದೇ ಕೃತಿ ಪು-೧೩೮
೧೫. ವೀರಣ್ಣ ದಂಡೆ, ಶ್ರೀಪಾದ ಶೆಟ್ಟಿ (ಸಂ), ಸುವರ್ಣ ಜಾನಪದ ಲೇಖನಗಳು ಪು-೪೧೭
೧೬. ಹಾಡಿದವರು ತಿಪ್ಪೇಸ್ವಾಮಿ, ಬೋಡಸಿದ್ಧಪ್ಪ, ಎನ್. ದೇವರಹಳ್ಳಿ
೧೭. ಹಿ.ಚಿ. ಬೋರಲಿಂಗಯ್ಯ, ದಾಸಪ್ಪ ಜೋಗಪ್ಪ ಪು-೧೬೮
೧೮. ವೀರಣ್ಣ ದಂಡೆ, ಶ್ರೀಪಾದ ಶೆಟ್ಟಿ (ಸಂ), ಸುವರ್ಣ ಜಾನಪದ ಲೇಖನಗಳು ಪು-೪೦೯
೧೯. ಅದೇ ಕೃತಿ ಪು-೪೧೮
೨೦. ಚೇತನಕುಮಾರ ಆರ್., ಬಳ್ಳಾರಿ ಜಿಲ್ಲೆಯ ಜನಪದ ವೃತ್ತಿಗಾಯಕರು, ಪು-೧೫೯
೨೧. ಕುಪ್ಪೆ ನಾಗರಾಜ, ದೊಂಬಿದಾಸ ಪು-೭೫
೨೨. ಅದೇ ಕೃತಿ ಪು-೭೬
೨೩. ಅದೇ ಕೃತಿ ಪು-೭೬
೨೪. ಅದೇ ಕೃತಿ ಪು-೮೪
೨೫. ಚೇತನಕುಮಾರ ಆರ್., ಬಳ್ಳಾರಿ ಜಿಲ್ಲೆಯ ಜನಪದ ವೃತ್ತಿಗಾಯಕರು, ಪು-೧೬೯
೨೬. ಖಂಡೋಬಾ ಪಿ.ಕೆ. ಸುಡಗಾಡುಸಿದ್ಧರ ಸಂಸ್ಕೃತಿ ಪು-೬೦

# ಅಧ್ಯಾಯ – ನಾಲ್ಕು
# ಮೌಖಿಕ ಸಾಹಿತ್ಯದಲ್ಲಿ ಅರೆವೃತ್ತಿಗಾಯಕರು

೪ ೧. ಕೋಲಾಟದವರು
೪ ೨. ಭಜನೆಯವರು
೪ ೩. ಬಯಲಾಟ ಮೇಳದವರು
೪ ೪. ಸೋಬಾನೆಯವರು

## ಅಧ್ಯಾಯ – ನಾಲ್ಕು
## ಮೌಖಿಕ ಸಾಹಿತ್ಯದಲ್ಲಿ ಅರೆವೃತ್ತಿಗಾಯಕರು

ಮೌಖಿಕ ಸಾಹಿತ್ಯದಲ್ಲಿ ವಿಶೇಷ ನೈಪುಣ್ಯತೆ ಪಡೆದ ಅರೆವೃತ್ತಿಗಾಯಕರ ಪಾತ್ರ ನಮ್ಮ ಸಂಸ್ಕೃತಿಗೆ ಮಹತ್ವವಾದದು. ಇವರು ವೃತ್ತಿಗಾಯಕರಂತೆ ಹಾಡುವುದನ್ನು ಮೂಲ ವೃತ್ತಿಯಾನ್ನಾಗಿಸಿಕೊಳ್ಳದೆ, ತಮ್ಮ ಮೂಲ ವೃತ್ತಿಯ ಜೊತೆಗೆ ಪ್ರವೃತ್ತಿಯಾಗಿಸಿಕೊಂಡು ಶ್ರೋತೃ ಅಥವಾ ಊರಿನ ಮುಖಂಡರ ಆಹ್ವಾನದ ಮೆರೆಗೆ ಹೋಗಿ ಅಲ್ಲಿ ನಡೆಯುವ ಜಾತ್ರೆ, ಹಬ್ಬ, ಹರಿದಿನ, ಉತ್ಸವ, ಮದುವೆ, ನಾಮಕರಣ, ಋತಿಮತಿ ಹಾಗೂ ಹೊಲ–ಮನೆಗಳಲ್ಲಿ ನಡೆಯುವ ಕಾರ್ಯಗಳಲ್ಲಿ ಭಾಗವಹಿಸಿ ತಮ್ಮ ಕಲಾಪ್ರದರ್ಶನವನ್ನು ನೀಡಿ, ಅವರಿಂದ ದವಸ ಧಾನ್ಯ, ಹಣ, ಹೊಸಬಟ್ಟೆಗಳನ್ನು ಸ್ವೀಕರಿಸಿ ನಂತರ ತಮ್ಮ ಮೂಲವೃತ್ತಿಗೆ ಹಿಂದುರುಗಿ ಬದುಕು ಸಾಗಿಸುವ ವೃತ್ತಿವರ್ಗವೇ ಅರೆವೃತ್ತಿಗಾಯಕರು.

"ಇವರು ವಿಶೇಷ ಸಂದರ್ಭಗಳಲ್ಲಿ, ಗೊತ್ತಾದ ನೆಲೆಗಳಲ್ಲಿ ಶ್ರೋತೃಗಳ ಆಹ್ವಾನದ ಮೆರೆಗೆ ತಮ್ಮಲ್ಲಿರುವ ಕಲಾನೈಪುಣ್ಯತೆಯನ್ನು ತಾವು ಕಲಿತ ಪರಂಪರಾಗತ ಮೌಖಿಕ ಪರಂಪರೆಯ ಜ್ಞಾನವನ್ನು ಒಂದು ನಿರ್ದಿಷ್ಟ ಕಾಲಾವಧಿಯಲ್ಲಿ ಹಾಡುತ್ತಾ, ಜನರು ಕೊಟ್ಟ ಉಡುಗೊರೆಗಳನ್ನು ಸ್ವೀಕರಿಸುತ್ತಾ, ಸ್ವೀಕರಿಸದೆಯಿರಬಹುದು ತಮ್ಮ ಉಪಜೀವನಕ್ಕಾಗಿ ಬೇರೊಂದು ವೃತ್ತಿಯನ್ನು ಅವಲಂಬಿಸಿರುವ ಗಾಯಕ ವರ್ಗವನ್ನು ಅರೆವೃತ್ತಿಗಾಯಕರೆಂದು"[೧] ಕರೆಯಲಾಗುತ್ತದೆ.

ನಮ್ಮ ರಾಜ್ಯಾದ್ಯಂತ ಅರೆವೃತ್ತಿಗಾಯಕರು ಶ್ರೋತೃ ವರ್ಗದ ಮನಃ ತಣಿಸಲು ತಮ್ಮ ಕಲಾಪ್ರದರ್ಶನಗಳನ್ನು ಏರ್ಪಡಿಸುವುದರ ಮೂಲಕ ಅವರ ಪ್ರೀತಿಗೆ ಪಾತ್ರರಾಗುತ್ತಾರೆ. ಅರೆವೃತ್ತಿಯೆಂದು ಗುರುತಿಸಲಾಗಿರುವ ಪ್ರಮುಖ ಗಾಯಕ ವರ್ಗಗಳೆಂದರೆ ಕೋಲುಮೇಳದವರು, ಭಾಗವಂತಿಕೆ ಮೇಳ, ಅಂಟಿಕೆ–ಪಿಂಟಿಕೆ, ಗೌರಿಮಕ್ಕಳು, ಜೋಕುಮಾರನ ಸಂಪ್ರದಾಯದವರು, ಭಜನೆಯವರು,

ಸೋಬಾನೆಯವರು, ಅಸಂದಿಯವರು ಮೊದಲಾದವರು. ನಾಯಕನಹಟ್ಟಿಯ ವ್ಯಾಪ್ತಿಯಲ್ಲಿ ಕಂಡು ಬರುವ ಪ್ರಮುಖ ಅರೆವೃತ್ತಿಗಾಯಕರು, ಕೋಲುಮೇಳದವರು, ಭಜನೆಯವರು, ಬಯಲಾಟದವರು, ಸೋಬಾನೆಯವರು. ಇವರನ್ನು ಕುರಿತು ಈ ಅಧ್ಯಯನದಲ್ಲಿ ಸ್ಥೂಲವಾಗಿ ಅಧ್ಯಯನಕ್ಕೆ ಒಳಪಡಿಸಿದೆ.

**೪ ೧. ಕೋಲಾಟದವರು :**

ಇದೊಂದು ಜನಪದ ಆಟ. ಇದು ಹಾಡು, ತಾಳ, ಕುಣಿತಗಳೊಂದಿಗೆ ಮುಪ್ಪರಿಗೊಂಡಿರುವ ಅಪ್ಪಟ ದೇಶಿಯ ಕಲೆಯ ಪಾರಂಪರಿಕ ಪ್ರತೀಕವಾಗಿದೆ. ಈ ಆಟದ ಮೂಲಕ ವ್ಯಕ್ತಿ. ವ್ಯಕ್ತಿತ್ವದ, ಸರ್ವಾಂಗೀಣ ಪ್ರಗತಿಯನ್ನು ಅಂದರೆ ಕುಣಿತದ ಮೂಲಕ ಆರೋಗ್ಯ ವೃದ್ಧಿಸಿದರೆ, ಹಾಡಿನ ಮೂಲಕ ವ್ಯಕ್ತಿತ್ವದ ಅಭಿವೃದ್ಧಿಯನ್ನು ಕಾಣಬಹುದು. ಕುಣಿತ, ಹಾಡುಗಳು ಸಾಮರಸ್ಯ ಕೋಲಾಟದ ಒಂದು ವೈಶಿಷ್ಟ್ಯ. "ಕುಣಿಯುತ್ತಲೆ ಹಾಡುವುದು, ಕೋಲು ಕೋಡುವುದು ಸಾಹಸ ಪೂರ್ಣ ಕಾರ್ಯ, ಹೆಜ್ಜೆಯ ಮೇಲೆ ದೃಷ್ಟಿ ಕೋಲಿನತ್ತರ ಎತ್ತಾರ, ಹಾಡಿನ ಬಳುಕಿನತ್ತ ಮನಸ್ಸು ಹೀಗೆ ಹಲವು ವಿದಧ ಚಾತುರ್ಯ ಪ್ರದರ್ಶನವೇ ಕೋಲಾಟವಾಗುತ್ತದೆಯೆಂದು" ಜೀಶಂಪರವರ ಅಭಿಪ್ರಾಯ ಕೋಲಾಟದ ಮಹತ್ವಕ್ಕೆ ಕೈಗನ್ನಡಿಯಾಗಿದೆ.

ಕೋಲಾಟವು ಜನಪದ ಮೂಲದಿಂದ ಬಂದಿದ್ದು, ನಮ್ಮ ಜನಪದರ ಹಬ್ಬ ಹರಿದಿನಗಳು, ಜಾತ್ರೆ, ಉತ್ಸವಗಳಲ್ಲಿ ಮನರಂಜನೆಗಾಗಿ, ದೈವನಂಬಿಕೆಯ ಸ್ಮರಣೆಗಾಗಿ, ಆರೋಗ್ಯವೃದ್ಧಿಗಾಗಿ ಕಂಡುಕೊಂಡ ಒಂದು ಜನಪದ ಕಲೆ, ಈ ಕಲೆಯನ್ನು ಪ್ರಚಾರ ಮಾಡುವ ವ್ಯಕ್ತಿಯನ್ನು (ಮೇಳಗಾರನು) ಕೋಲಾಟದ ಮಾಸ್ತರು ಎಂದು ಕರೆಯುವುದು ವಾಡಿಕೆಯಾಗಿ, ಇವನ ಕಲಾಸೇವೆಗಾಗಿ ನಮ್ಮ ಜನಪದರು ದವಸಧಾನ್ಯ, ಉಡುಗೊರೆಗಳನ್ನು ನೀಡಿ ಗೌರವಿಸುತ್ತಿದ್ದರು. ಈ ಮೇಳಗಾರರನ್ನು ತಾನು ಕಲಿತ ಕಲಾನೈಪುಣ್ಯತೆಯನ್ನು ಮೌಖಿಕ ಪರಂಪರೆಯನ್ನು ತನ್ನ ಕಲಾಸೇವೆಯ ಮೂಲಕ ಒಂದು ಪೀಳಿಗೆಯಿಂದ ಇನ್ನೊಂದು ಪೀಳಿಗೆಗೆ ವರ್ಗಾಯಿಸುವುದರ ಮೂಲಕ ನಮ್ಮ ಮೌಖಿಕ ಪರಂಪರೆಯ ರಕ್ಷಕನಾದನು. ವಿಶಿಷ್ಟ ಕಲಾ ನೈಪುಣ್ಯತೆಯನ್ನು ಪಡೆದಿರುವ ಮೇಳೆಗಾರನು ತನ್ನ ವೃತ್ತಿಯ ಜೊತೆಗೆ ಗ್ರಾಮೀಣರ ಆಹ್ವಾನದ ಮೇರೆಗೆ ಹೋಗಿ ಆಟ ಕಲಿಸಿದ ತಂಡಗಳೊಂದಿಗೆ ಜಾತ್ರೆ, ಹಬ್ಬ ಹರಿದಿನಗಳಲ್ಲಿ ಕೋಲು ಮೇಳವನ್ನು ಪ್ರದರ್ಶಿಸಿ, ಅವರಿಂದ ಉಡುಗೊರೆಗಳನ್ನು ಸ್ವೀಕರಿಸುವ ಇವರನ್ನು ಅರೆವೃತ್ತಿಗಾಯಕರೆಂದು ಕರೆಯಲಾಗಿದೆ.

**ಕೋಲಾಟದ ಪ್ರಾಚೀನತೆ :**

ಜನಪದ ಕುಣಿತವಾದ ಕೋಲಾಟವು ನಾಗರಿಕ ಸಮುದಾಯವನ್ನು ಬಿಡಲಿಲ್ಲ. ರಾಜರು-ರಾಣಿಯರು ಸಹ ಈ ಆಟಕ್ಕೆ ಮನಸೋತು ಆಡತೊಡಗಿದರು. ಮೂಲತಃ ಪುರುಷರ ಕುಣಿತವಾದ ಕೋಲಾಟವನ್ನು ಆಸ್ಥಾನದ ಮಹಿಳೆಯ ಹೆಚ್ಚು ಮನೋಹರಗೊಳಿಸಿದರೆಂಬ ಉಲ್ಲೇಖಗಳು ನಮ್ಮ

ಶಿಷ್ಟಸಾಹಿತ್ಯದಿಂದ ಗುರುತಿಸಬಹುದು. ಸಂಸ್ಕೃತ ನಾಟಕಗಳಲ್ಲಿ ಮತ್ತು ರಾಜಶೇಖರನ 'ಕರ್ಪೂರ ಮಂಜರಿ' ಕೃತಿಯಲ್ಲಿ ಕೋಲಾಟದ ಉಲ್ಲೇಖಗಳಿವೆ. ೧೬ನೇ ಶತಮಾನದ 'ಪುಂಡಲೀಕ ವಿಠಲ'ವೆಂಬ ಶಾಸ್ತ್ರಕಾರನು ತನ್ನ 'ನರ್ತನ ನಿರ್ಣಯ' ಎಂಬ ಕೃತಿಯಲ್ಲಿ ಕೋಲಾಟವನ್ನು 'ದಂಡರಾಸ' (ದಂಡ–ಕೋಲು, ರಾಸು–ಕುಣಿತ.) ಎಂದು ಕರೆದಿದ್ದಾನೆ.

ಕೋಲಾಟವು ನಮ್ಮ ದೇಶದಾದ್ಯಂತ ಕಂಡುಬರುವ ಆಟವಾದರೂ ಇದು ಹೆಚ್ಚು ದಕ್ಷಿಣ ಭಾರತದಲ್ಲಿ ಕಂಡುಬರುತ್ತದೆ. ನಮ್ಮ ರಾಜ್ಯದಲ್ಲಿ ಕೋಲಾಟದ ವ್ಯಾಪ್ತಿ ವಿಸ್ತಾರವಾಗಿ ಪ್ರಾದೇಶಿಕ ಭಿನ್ನತೆಯೊಂದಿಗೆ ಗುರುತಿಸಿಕೊಂಡರು ಸಹ ಸಾಮ್ಯತೆಯನ್ನು ಕಾಣಬಹುದು. ನಮ್ಮ ರಾಜ್ಯದ ಬೆಂಗಳೂರು, ಬಳ್ಳಾರಿ, ತುಮಕೂರು, ಉತ್ತರ ಕನ್ನಡ, ಹಾಸನ, ಧಾರವಾಡ, ಬೆಳಗಾವಿ, ಚಿತ್ರದುರ್ಗ ಮೊದಲಾದ ಜಿಲ್ಲೆಗಳಲ್ಲಿ ಕಂಡುಬರುತ್ತದೆ.

ನಾಯಕನಹಟ್ಟಿಯ ವ್ಯಾಪ್ತಿಯಲ್ಲಿ ಬರುವ ೩೨ ಗ್ರಾಮಗಳಲ್ಲಿ ಸುಮಾರು ೨೫ ಗ್ರಾಮಗಳಲ್ಲಿ ಕೊಳಲಮೇಳದ ತಂಡಗಳನ್ನು, ಮೇಳಗಾರರನ್ನು ಗುರುತಿಸಬಹುದು. ಬಹುತೇಕ ಬುಡಕಟ್ಟು ನಿವಾಸಿಗಳಾದ ಮ್ಯಾಸಬೇಡರು, ಗೊಲ್ಲರು, ಕುರುಬರು, ಲಂಬಾಣಿಗಳು, ಆದಿಕರ್ನಾಟಕ, ಬೋವಿಗಳು ಮೊದಲಾದ ಸಮುದಾಯಗಳಲ್ಲಿ ಕೋಲುಹುಯ್ಯುವುದು ಒಂದು ಪಾರಂಪರಿಕ ಕಲೆಯಾಗಿದೆ.

**ಕಲಾ ತಂಡಗಳ ರಚನೆ ಮತ್ತು ಪ್ರದರ್ಶನ :**

ಇಲ್ಲಿನ ಪ್ರತಿಯೊಂದು ಗ್ರಾಮದಲ್ಲಿ ಕೋಲಾಟದ ತಂಡಗಳಿದ್ದು ತಮ್ಮ ಬಿಡುವಿನ ಸಮಯದಲ್ಲಿ, ಹಬ್ಬ–ಹರಿದಿನಗಳು, ಜಾತ್ರೆ, ಉತ್ಸವ. ತಮ್ಮ ಹೊಲಮನೆ ಕಾರ್ಯಗಳಲ್ಲಿ ಕೋಲು ಹುಯ್ಯುವುದನ್ನು ಕಾಣಬಹುದು. ಕೋಲು ಹುಯ್ಯಲು ಕನಿಷ್ಟ ೮ರಿಂದ ೨೦ ಜನರ ಅವಶ್ಯಕತೆಯಿದ್ದರೂ, ಸಮಸಂಖ್ಯೆಯಲ್ಲಿರಬೇಕು. ತಂಡ ರಚನೆ ಮಾಡಿಕೊಂಡ ನಂತರ ಎಲ್ಲರೂ ವೃತ್ತಾಕಾರವಾಗಿ ಎದುರು–ಬದರಾಗಿ ನಿಂತುಕೊಳ್ಳುತ್ತಾರೆ. ಮೇಳಗಾರನು ಮಧ್ಯದಲ್ಲಿದ್ದು ಅಥವಾ ಅದರಲ್ಲಿ ಒಬ್ಬನು ಮೇಳಗಾರನಾಗಿ ಗಣಸ್ತುತಿಯೊಂದಿಗೆ ಹಾಡನ್ನು ಪ್ರಾರಂಭಿಸುತ್ತಾನೆ. ಉಳಿದ ಆಟಗಾರರು ತಾವು ಹಾಡಿಗೆ ತಕ್ಕಂತೆ ಹೆಜ್ಜೆ ಹಾಕುತ್ತಾ, ಕೋಲು ಹುಯ್ಯತ್ತಾ, ಹಾಡನ್ನು ಪುನರುಚ್ಚರಿಸಿತ್ತಾ ಆಟವನ್ನು ಮುಂದುವರಿಸುವರು. ಆಟದ ಮಧ್ಯದಲ್ಲಿ ಹೆಜ್ಜೆ ತಪ್ಪಿದರೆ, ಅವರಿಗೆ ಸಲಹೆ, ಸೂಚನೆಯನ್ನು ಮೇಳಗಾರನು, (ಕೋಲುಮೇಷ್ಟ್ರು) ನೀಡಿ ಪುನಃ ಆಟವನ್ನು ಮುಂದುವರಿಸಿ ಅಲ್ಲಿ ನೆರೆದ ಪ್ರೇಕ್ಷಕರನ್ನು ರಂಜಿಸುತ್ತಾರೆ. ಕೋಲಾಟವನ್ನು ವಿಶೇಷವಾಗಿ ಸ್ಥಳೀಯ ಹಬ್ಬ–ಹರಿದಿನಗಳಲ್ಲಿ ಆಡುವುದನ್ನು ನೋಡಬಹುದು. ಈ ಆಟವನ್ನು ಸಂದರ್ಭಕ್ಕೆ ತಕ್ಕಂತೆ ೧ ಗಂಟೆಯಿಂದ ೩ ಗಂಟೆಯವರೆಗೂ ತಮ್ಮ ಪ್ರದರ್ಶನ ನೀಡುವವರು. ಈ ಸಮಯದಲ್ಲಿ ನಡು, ನಡುವೆ ವಿಶ್ರಮಿಸಲು ತಕ್ಕಂತೆ ಕೋಲು ಪ್ರಕಾರವನ್ನು ಹುಯ್ಯತ್ತಾ ವಿಶ್ರಾಂತಿ ಆಟದಲ್ಲಿ ಕಲ್ಪಿಸಿಕೊಂಡಿರುವುದು ನಮ್ಮ ಜನಪದರ ತಾರ್ಕಿಕ ಮುಂದಾಲೋಚನಾ ಶಕ್ತಿಗೆ ಹಿಡಿದ ಕೈಗನ್ನಡಿಯಾಗಿದೆ.

ಹೀಗೆ ಅವರು ತಮ್ಮ ತಂಡಗಳನ್ನು ರಚಿಸಿಕೊಂಡು ಆಡುತ್ತಾ ಸಮಾಜಿಕರಿಂದ ಕೊಡುವ ಉಡುಗೊರೆಗಳನ್ನು ಸ್ವೀಕರಿಸಿ ತಮ್ಮ ಕಲಾ ಸೇವೆಯನ್ನು ಪ್ರತಿಫಲವಾಗಿ ನೀಡುತ್ತಾ ನಮ್ಮ ಮೌಖಿಕ ಪರಂಪರೆಯ ಸಂಪರ್ಕ, ಸಂವಹನ ಸಾಧನಗಳಾಗಿ ಕಾರ್ಯನಿರ್ವಹಿಸುವರು.

**ಕೋಲಾಟದ ಪ್ರಕಾರಗಳು :**

ನಾಯಕನಹಟ್ಟಿ ವ್ಯಾಪ್ತಿಯ ಕೋಲಾಟದಲ್ಲಿ ಹಲವು ಪ್ರಕಾರಗಳನ್ನು ಗುರುತಿಸಬಹುದು. ತಾಳಕಟ್ಟಿಗೆ ಕೋಲು, ಬೆನ್ನುಚಟ್ಟುಕೋಲು, ಚಿತ್ತಾರಕೋಲು, ಚಪ್ಪಾರದ ಕೋಲು, ಗೆಜ್ಜೆಕೋಲು, ನಿಲುಗೋಲು, ಜಡೆ ಕೋಲು.

ತಾಳಕಟ್ಟಿಗೆ ಕೋಲು ಇದು ಒಂದೆ ತಾಳಕ್ಕೆ ಕೋಲು ಬಡಿದು ಆಡುವ ಕೋಲು. ಒಬ್ಬರನ್ನೊಬ್ಬರು ಸುತ್ತಿಕುಣಿದು ಕೋಲು ಹುಯ್ಯುವುದು ಚಿತ್ತಾರಕೋಲು, ಒಬ್ಬರಿಗೊಬ್ಬರು ನಿಂತು ತಲೆಯಮೇಲೆ ಕೋಲು ಹುಯ್ಯುವುದು ಚಪ್ಪಾರದಕೋಲು, ಕೆಳಗೆ ಬಾಗಿ, ಇಲ್ಲವೆ ಕುಕ್ಕರಕುಳಿತ ಕೋಲು ಬಡಿದರೆ ಗೀಲುಗೊಲು, ಸಮತಟ್ಟಾದ ನೆಲದಲ್ಲಿ ಎರಡು ಬದಿಯಲ್ಲಿ ಕಂಬಗಳನ್ನು ನೆಟ್ಟು, ಮಧ್ಯ ಅವುಗಳಿಗೆ ಅಡ್ಡವಾಗಿ ಒಂದು ಉದ್ದನೆಯ ಬಿದಿರನ್ನು ಕಟ್ಟಿ, ಅದಕ್ಕೆ ಉದ್ದವಾದ ನೂಲಿನ ಹಗ್ಗಗಳನ್ನು ಕಟ್ಟಿ, ಕೈಯಲ್ಲಿ ಚಿಟಿಗೆ ಕೋಲು ಹುಯ್ಯುತ್ತಾ, ಜಡೆ ಎಣೆದುಕೊಳ್ಳುವಂತೆ ವೃತ್ತಾಕಾರವಾಗಿ ತಿರುಗಿ ಆಡುವ ಕೋಲಿಗೆ ಜಡೆಕೋಲೆಂದು ಕರೆಯಲಾಗುತ್ತದೆ. ಕೋಲಾಟವು ಗಂಡು ವಿದ್ಯೆಯಾಗಿದ್ದು, ವೀರರಸ, ಶೃಂಗಾರಸಗಳ ಸಮ್ಮಿಶ್ರಣದ ಆಟವಾಗಿದೆ.

**ಕೋಲಾಟದ ಸಾಧನ ಪರಿಕರಗಳು :**

* ಕೋಲು ಹುಯ್ಯುವರು. ಇವರು ಸಾಮಾನ್ಯವಾಗಿ ಇಂತಿಷ್ಟು ಸಂಖ್ಯೆ ನಗದಿಯಗದಿದ್ದರೂ ಸಮ ಸಂಖ್ಯೆಯಲ್ಲಿರಬೇಕು. ೮ ರಿಂದ ೨೦ ಜನ ಆಟಗಾರರು ಭಾಗವಹಿಸಬಹುದು. ೧೦, ೧೨ ಜನರಿಂದ ತಂಡದ ಕೋಲಾಟ ನೋಡಲು ಹಾಗೂ ತಮ್ಮ ಆಟದಲ್ಲಿ ತಪ್ಪಿಲ್ಲದಂತೆ ಕೋಲು ಹುಯ್ಯಲು ಅನುಕೂಲವಾಗಿರುವುದೆ.
* ಕೋಲು ಕಡ್ಡಿಗಳು. ಇವು ಸಾಮಾನ್ಯ ಒಂದಿಂಚು ಇಲ್ಲವೆ ಎರಡು ಇಂಚು ದಪ್ಪವಾಗಿದ್ದು, ಒಂದುವರೆ ಅಡಿ ಉದ್ದದ ಕವಳೆ, ಹೊಂಗೆ, ಜಾಲಿ, ಕಾರೆ ಕಟ್ಟಿಗೆಗಳಿಂದ ತಯಾರಿಸಿ, ಅವುಗಳಿಗೆ ಬಣ್ಣಹಚ್ಚಿ, ಒಣಗಿಸಿ, ಕೋಲು ಹುಯ್ಯುವಾಗ ಝಣಲ್ ಎಂಬ ಶಬ್ದವನ್ನು ಹೊರಸೂಸುತ್ತವೆ.
* ಗೆಜ್ಜೆ 'ಕೋಲಿಗೆ ತಕ್ಕಂತೆ ಹೆಜ್ಜೆಹಾಕು, ಹೆಜ್ಜೆಗೆ ತಕ್ಕಂತೆ ಗೆಜ್ಜೆಕಟ್ಟ' ಎನ್ನುವ ನಾಣ್ನುಡಿಯಂತೆ, ಕೋಲಾಟಕ್ಕೆ ಮೆರಗನ್ನು ಕೊಡುವುದು ಗೆಜ್ಜೆಯ ನಿನಾದ.

* ತಾಳ ಕೋಲಾಟದ ಮೇಳಗಾರನು ಅಥವಾ ಕೋಲು ಮೇಳದ ಮಾಸ್ತರು ತಂಡದ ಮಧ್ಯದಲ್ಲಿದ್ದು ತಾಳ ಬಡಿಯುತ್ತಾ ಹಾಡುವನು.

**ಕೋಲಾಟದ ಪದಗಳು ಮತ್ತು ಸಾಹಿತ್ಯಿಕ ಮೌಲ್ಯ :**

ಕೋಲಾಟವು ಜನಪದ ಕಲೆಯಾಗಿದ್ದು ಇದರಲ್ಲಿ ಬಳಸುವ ಹಾಡುಗಳ ಮೂಲ ಮೌಖಿಕ ಪರಂಪರೆ. ಮೌಖಿಕ ಸಾಹಿತ್ಯದ ಗೀತೆಗಳು, ಕಥೆಗಳು, ಒಗಟು, ಒಡುಪುಗಳು, ಗಾದೆಗಳು, ರಾಮಾಯಣ, ಮಹಾಭಾರತಕ್ಕೆ ಸಂಬಂಧಿಸಿದಂತೆ ತಮ್ಮ ಆಟದಲ್ಲಿ ಆಡುವಾಗ ಪದಗಳನ್ನು ನೋಡಬಹುದು. ಸ್ಥೂಲವಾಗಿ ಇವರು ಹಾಡುಗಳು ಶೃಂಗಾರಮಯವಾಗಿ, ಕಾವ್ಯಮಯವಾಗಿ, ರಸಭರಿತವಾಗಿ, ಸಾಹಸಕಾರ್ಯ ಪ್ರಧಾನವಾಗಿ, ಪೌರಾಣಿಕ, ಪ್ರಣಯ, ಹಾಸ್ಯ, ಸಂಕೀರ್ಣ, ಐತಿಹಾಸಿಕ, ಆಧ್ಯಾತ್ಮಿಕ, ವಾಸ್ತವಿಕ, ಸಂಸಾರಿಕ ಕುರಿತ ವಸ್ತುವಿಷಯದನ್ನೊಳಗೊಂಡ ಹಾಡುಗಳಾಗಿರುತ್ತವೆ.

ಕೋಲನ ಕೋಲನ್ನ ಕೊಲೆ ಸಿರಿಗಂಧಾದಿ ಕೋಲನ ಕೋಲನ್ನ ಕೋಲೆ
ತಂಗುಳನೆ ಎಂಡಾನು ತಣ್ಣೀರು ಕುಡಿದಾನು ।
ಮಾಡಿಕೊಂಡೆಂಡರನಲ ಮರೆತಾನು ರನ್ನಾದಿ ॥ಪ॥
ಮಾಡಿಕೊಂಡೆರನು ಮರೆತಾನು ಮದಕೇರಿ ।
ನಡುದಾನು ಜರುಮಲೆ ಜಗಳಕ್ಕೆ ರನ್ನಾದಿ ॥ ಕೋಲನ ॥

ಕೋಲಾಟದವರು ತಾವು ಹಾಡಿಗೆ ರಾಗ, ಲಯ, ಸಂಗೀತ, ನೃತ್ಯಸೇರಿಸಿ ಸರಳ ಕತೆಯನ್ನು ಭಾವನಾತ್ಮಕವಾಗಿ, ಕಂಠಸ್ಥರೂಪದಲ್ಲಿ ಹಾಡುವ ಹಾಡಿಗೆ ನೆರೆದ ಪ್ರೇಕ್ಷಕರ ಮನಸ್ಸನ್ನು ಸೂರೆಗೊಳ್ಳುವರು. ಕೋಲಾಟದವರು ತಾವು ಕುರಿತು ಹಾಡುವ ಹಾದಿಗೆ ಮೊದಲು ಕೊಲಿನ ಮೂಲಕ ಶುಭವನ್ನು ತಮ್ಮ ಪದರಚನೆಯ ಮೂಲಕ ಕೋರಿ ನಂತರ ಹೇಳಬೇಕಾದ ವಿಷಯವನ್ನು ಪ್ರಸ್ತಾಪಿಸುತ್ತಾರೆ. ಐತಿಹಾಸಿಕ ಪುರುಷನಾದ ಮದಕರಿನಾಯಕನ ಶೌರ್ಯ, ಸಾಹಸವನ್ನು, ಅವನಲ್ಲಿ ಜರಿಮಲೆಯ ಮೇಲೆ ಕೈಗೊಂಡ ಯುದ್ಧದ ಬಗ್ಗೆ ಹೇಳುವುದನ್ನು ಕಾಣಬಹುದು.

"ಎಂತ ಮನುಗಾರ ನೋಡಮ್ಮ, ಮದಕೇರಿ ಭೂಪ
ಎಂಥ ವಜ್ಜರ ನೋಡಮ್ಮ ॥ಪ॥
ಸುತ್ತಮುತ್ತ ಸುರಪಾಣಿ । ನಟ್ಟ ನಡುವೆ ಕೀಲು ಕಂಬ ।
ಕೀಲಿ ಕಂಬ ನಡುಕೊಂಡು ಕಿಲಿ ಕಿಲಿ ನಗುತಾನೆ ॥ಎಂಥ॥
ತಾಕಿತು ತಗಲಿತು ಥರ್ಯ್ಯ ಥಗಡದತ್ತಯ"[೨]

ಚಿತ್ರದುರ್ಗದ ಪಾಳೆಗಾರ ಮದಕರಿನಾಯಕನು ತಮ್ಮ ಸಂಸ್ಕೃತಿಯ ಐತಿಹಾಸಿಕ ಪುರುಷನೆಂದು. ಅವನನ್ನು ಕುರಿತು ವಿನೋದ ಪ್ರಯಾವಾಗಿ ತಮ್ಮ ಕೋಲಾಟಗಳಲ್ಲಿ ಹಾಡುವುದನ್ನು ಗುರುತಿಸಬಹುದು.

"ಕೂಸೇ ಬ್ಯಾಡಿಂಕಾ ನ್ಯಾಯಾದೋಳ್ ಕದನ
ಅಟ್ಟ ಮೇಲೆಸಾರ್ ಹುಡುಗಿ ಇಟ್ಟಳ್ರಿ... ಕದನಾ
ಇಟ್ಟಳ್ರಿ... ಕದನಾ... ಹೆಂಗೆ ಮರೆಯಲೆ ನಿನ್ನಾ...
ಎಬ್ಬಿರಿಸೊ. ಹಿಂದಿನ ಗಾಳಿ, ಗಾಳಿ ಕೆಂದೊಳವು
ಗಾಳಿ ಕೆಂದೊಳವು... ಹೇಂಗೆ ಮರೆಯಲೆ ನಿನ್ನಾ...[೩]

ಸಂಸಾರಿಕ ಜೀವನದಲ್ಲಿ ಪತಿ-ಪತ್ನಿಯ ನಡುವೆ ಉಂಟಾಗುವ ವಿರಹ-ವೇದನೆಯನ್ನು ಕಾಣಬಹುದು. ಬೇರೆಯವರ ಹೇಳಿಕೆ ಮಾತುಗಳಿಂದ ಮುನಿಸಿಕೊಂಡ ಗಂಡ-ಹೆಂಡತಿಯರು, ಸಂಸಾರದಲ್ಲಿ ಬಿರುಗಾಳಿಯಂತೆ ಬಂದು ತಮ್ಮ ನೆಮ್ಮದಿಯಣ ಕೆಡಸಿದರೂ ಅವನು, ಅವಳ ಮೂಡಿನಲ್ಲಿ ದಿನದೂಡುವ ಮಾನಸ್ಸಿಕ ಸಂದೇಹವನ್ನು ಕಾಣಬಹುದು.

"ಗೊಡ್ಡು ಮುಂಡೇಸಿನ ಗುಮ್ಮಾಡಿರೆ
ಇದಿ ಬಂಜಿ ಮುಂಡೇದು ಗುಮ್ಮಾಡಿರೋ
ತ್ವಾಟಕೆ ಹಬ್ಬದೆ ಗುಮಾಡಿರೋ
ತ್ವಾಟ ಮುಗುಳಾಗಿ ಹಬ್ಬಾದೆ ಗುಮ್ಮಾಡಿರೋ
ಇದಿ ಪೂವನ್ನು ಕಾಯದೊ ಗುಮ್ಮಾಡಿರೊ"

ಬಂಜೆಯು ತನ್ನ ತೋಟದಲ್ಲಿ ಒಂದು ಕುಂಬಳ ಬೀಜವನ್ನು ಬಿತ್ತಿದ ನಂತರ ಅದು ತೋಟದ ತುಂಬೆಲ್ಲಾ ಹರಡಿ, ವಿಶಾಲವಾಗಿ ಹರಡಿ ಹಚ್ಚಹಸಿರಾಗಿಂದ ಕಂಗೊಳಿಸುತ್ತಿದ್ದರು. ಅದು ಫಲ ನೀಡುವುದಿಲ್ಲ. ಅಂದರೆ ಬಂಜೆಯ ಮಾನಸಿಕ ಯಾತನೆ, ಸಮಾಜ ಅನಾವರಣೆ, ನಿರ್ಲಕ್ಷವನ್ನು ಇಲ್ಲಿ ಬಂಜೆಯನ್ನು ಕುಂಬಳಗಿಡದೊಂದಿಗೆ ಅನುಕರಿಸಿ ಆಟ ಆಡುತ್ತಾ ಕೋಲು ಹುಯ್ಯೊವುದು ನೋಡುಬಹುದು.

"ಜಂತಕಾ ಜಂತಾಕಾ, ತಾದಿ ಜಂತಾಕಾ
ದಿತ್ತಾ ಜಂತಗಿ ತಾಜಂತಕಾಧಿಗಿ ದಿಗಿ ಜಂತಕಾ
ತಪ್ಪಿನಾಗಿಕಿ ತಂಗಡ ಬರ್ರಲು, ಮರಿಸಿನಾನಕಿ ಮಾವುಡಿ ಬರ್ರಲು
ನೆಪ್ಪುಣ್ಣಾನಿಕಿ ವೆಲ್ಲೆ ಕಾಯಲು ಮೊಗ್ಗಲು
ಜಂತಕಾ ಜಂತಕಾ ತಾದಿ ಜಂತಕಾ"[೪]

ಕೋಲಾಟವು ಪ್ರಾರಂಭದಲ್ಲಿ ಗಣಸ್ತುತಿಯೊಂದಿಗೆ ಪ್ರಾರಂಭವಾಗಿ, ಮುಂದೆ ಅದು ತಿವ್ರಗತಿ ಪಡೆಯಲು ಕೋಲು ಕಡ್ಡಿಗಳ ಮೂಲಕ ಕೋಪು ಬದಲಿಸಲು ಮೇಳಗಾರನು ಮುಂದಿನ ಕೋಪುನ್ನು ನೆನೆಸುತ್ತಾ, ಆಟಗಾರರು ಆ ಕೋಪಿನ ನೆನಪನ್ನು ನೆನಸಿಕೊಂಡು ಕೋಲು ಹುಯ್ಯವರು

ಹಾಗೆಯೇ ಮೇಳಗಾರನು ಮರೆತವರಿಗೆ ಶಿಕ್ಷೆ, ನೆನಪಿನಲ್ಲಿರುವರಿಗೆ ಹೊಗಳುವುದರ ಮೂಲಕ ಆಟಕ್ಕೆ ವಿನೋದವನ್ನು ತಮ್ಮ ಹಾಡಿನ ಮೂಲಕ ಮಂಟಪಮಾಡುವುದನ್ನು ಕಾಣಬಹುದು.

"ಕೋಲೆ ರನ್ನಾದಿ ಕೋಲೆ, ಚಿನ್ನಾದಿ ಕೋಲೆ, ಮುತ್ತಿನ ಕೋಲೆ
ಕೋಲೆಂದು ಪಾಡಿರಿ ಬಾಲೆ, ಈ ಊರ ಲೋಲ ಹನುಮಯ್ಯನ ಮ್ಯಾಲೆ"

ಕೋಲಾಟನ್ನು ನೃತ್ಯ, ಹಾಡು, ಸಂಗೀತ, ಸಂಯೋಜಿತವಾದ ಕಲೆಯಾಗಿದ್ದು ಇದನ್ನು ಪ್ರಾರಂಭಿಸುವಾಗ ಆಟದ ನಾಯಕನು (ಮೇಳಗಾರನು) ಕೋಲಿನ ಮಹತ್ವವನ್ನು ಅದೊಂದು ಜನ್ಯ ಸಂಪತ್ತು ಎಂದು ಹೇಳುತ್ತಾ ಆಟ ಆಡುವ ಹುಡುಗರೆ ಈ ಊರಿನ ಹನುಮಂತನನ್ನು ನೆನೆಸಿ ನಮ್ಮ ಕೋಲು ಹೊಯ್ಯುವುದನ್ನು ಪ್ರಾರಂಭಿಸಿದೆವೆಂದು ದೇವರ ಸ್ತುತಿಯ ಮೇಲೆ ಆಟವನ್ನು ಪ್ರಾರಂಭಿಸುವುದನ್ನು ಕಾಣಬಹುದು.

"ಕೋಲು ಹುಯ್ಯುಕೆ ಬಂದೀವಿ, ಅಪ್ಪಣೆ ಕೊಡಿರಿ ನಮಗೆ ॥ಪ॥
ರಾಮದುರ್ಗದೆಂಬ ಹುಡಗರು ಹಟ್ಟಿ ತಿಪ್ಪೇಶನ ಜಾತ್ರೆಗೆ ಬಂದೆವು
ಹಟ್ಟಿ ತಿಪ್ಪಯ್ಯನ ತೇರಿಗೆ ಬಂದೆವು ಸ್ವಾಮಿ ಇದರಲ್ಲಿ ಏನಾದರೂ
ತಪ್ಪಾಗಲು ಬಂದರೆ । ನೀವೆ ಪಾಲಿಸಬೇಕು ನಮ್ಮಗೆ ॥ಪ॥
ಕುಂತ ಕೇಳ ಜನರೆಲ್ಲಾ ಸ್ವಾಮಿ ನಿಂತು ಕೇಳಾ ಸಭೆಯಲ್ಲಾ
ಸ್ವಾಮಿ ನಿಂತು ಕೇಳಾ ಸಭೆಯಲ್ಲಾ, ಸ್ವಾ ಸಭೆಯಲ್ಲಿ ತಪ್ಪಾಗಳಾದರೆ ನೀವೆ
ಪಾಲಿಸಬೇಕು"॥ಪ॥

ಹಟ್ಟಿ ಜಾತ್ರೆ ಎಂದು ಜನಪದರಲ್ಲಿ ಪ್ರಸಿದ್ಧಿಯಾಗಿರುವ ನಾಯಕನಹಟ್ಟಿ ತಿಪ್ಪೇಸ್ವಾಮಿ ಚರಿತ್ರೆಯು ಜನಪದ ಕಲೆಗಳ ನೆಲೆಯಾಗಿದ್ದು, ಜಾತ್ರೆಯಲ್ಲಿ ಆಯಾಯ ಗ್ರಾಮಗಳ ಕೋಲು ತಂಡದವರು ಬಂದು ತಮ್ಮ ಕೋಲು ಪ್ರದರ್ಶನವನ್ನು ನೀಡುತ್ತಾರೆ. ರಾಮದುರ್ಗ ಗ್ರಾಮದ ತಂಡದವರು ತಾವು ಆಟವಾಡುವಾಗ ಜರುಗುವ ತಪ್ಪು-ಒಪ್ಪುಗಳನ್ನು ನೋಡುವ, ಕೇಳುವ ಪ್ರೇಕ್ಷಕರು ಮನ್ನಿಸಿ, ಕೋಲು ಮೇಳಕ್ಕೆ ಪ್ರೋತ್ಸಾಹ ನೀಡಬೇಕೆಂದು ಆಡು ಮಾತಿಗೆ, ಅದಕ್ಕೊಂದು ರಾಗ ಜೋಡಣೆ ಮಾಡಿ, ಕಂಠಸ್ಥ ರೀತಿಯಲ್ಲಿ ಹಾಡುವುದು ಜನಪದರಿಗೆ ದೈವದತ್ತವಾದವರವೆಂದು ಹೇಳಬಹುದು.

ಕೋಲು ಮೇಳದವರು ತಮ್ಮ ಮೇಳ ಪ್ರದರ್ಶನವನ್ನು ಜಾತ್ರೆ, ಉತ್ಸವ, ಹಬ್ಬ, ಹರಿದಿನ, ಹೊಲ ಮನೆ ಕಾರ್ಯಗಳಲ್ಲಿ ನೀಡುತ್ತಾ, ಸಾಮಾಜಿಕರು ಸಂತೋಷದಿಂದ ನೀಡುವ ಉಡುಗೊರೆಗಳನ್ನು ಸ್ವೀಕರಿಸಿ ಮತ್ತೆ ಮೂಲ ವೃತ್ತಿಯೊಂದಿಗೆ ಜೀವನ ನಿರ್ವಹಿಸುವರು. ಇವರು ಶ್ರೋತೃಗಳನ್ನು ತೃಪ್ತಿಗೊಳಿಸಲು ತಾವು ಕಲಿತ ವಿದ್ಯೆಯನ್ನು ಸಮಾಜದ, ಸಂಸ್ಕೃತಿಗೋಸ್ಕರ ಬಳಕೆ ಮಾಡುವ ಅರೆವೃತ್ತಿ ಗಾಯಕರಾಗಿರುವರು.

## ೪ ೨. ಭಜನೆ ಮೇಳದವರು :

ಜನಪದರು ತಮ್ಮ ಕೆಲಸ-ಕಾರ್ಯಗಳಿಗೆ, ಕಷ್ಟ, ಸುಖಗಳಿಗೆ ದೇವಿಶಕ್ತಿಯ ಮೊರೆಹೋಗುತ್ತಾರೆ. ಜೀವನದ ಪ್ರತಿಯೊಂದು ಘಟನೆಗಳಿಗೆ ದೇವರು-ದಿಂಡಿರುಗಳು ಕಾರಣವೆಂದು ನಂಬಿ ಪ್ರತಿನಿತ್ಯ ದೇವರ ಸ್ತುತಿಯನ್ನು ನೆನೆಯುತ್ತಾ ತಮ್ಮ ಬದುಕಿನ ಬಂಡಿಯನ್ನು ಸಾಗಿಸುತ್ತಾರೆ. ತಮ್ಮ ಕೆಲಸ-ಕಾರ್ಯಗಳ ಬಿಡುವಿನ ವೇಳೆಯಲ್ಲಿ ಮನಸ್ಸಿನ ವಿಶ್ರಾಂತಿಗಾಗಿ, ದೈವದ ಆರಾಧನೆಗಾಗಿ, ಒಂದು ಗೊತ್ತಾದ ಸ್ಥಳದಲ್ಲಿ ಧಾರ್ಮಿಕ ಮತ್ತು ಲೌಕಿಕ ಕಥಾವಸ್ತುವನ್ನೊಳಗೊಂಡ ಹಾಡುಗಳನ್ನು ಮುಖ್ಯ ಗಾಯಕನು, ತನ್ನ ಹಿಮ್ಮೇಳದವರೊಂದಿಗೆ, ವಾದ್ಯಪರಿವಾರಗಳೊಂದಿಗೆ ಗಾಯನ ನಡೆಸುವ ಭಜನೆ ಪರಂಪರೆ ನಮ್ಮ ರಾಜ್ಯಾದಾದ್ಯಂತ ಕಂಡುಬರುತ್ತದೆ.

ಇವರು ವಿಶೇಷ ಸಂದರ್ಭಗಳಲ್ಲಿ ಗ್ರಾಮೀಣರಿಂದ ಆಹ್ವಾನಿತರಾಗಿ, ತಮ್ಮ ಸೇವೆಗಾಗಿ ಹಣ, ಉಡುಗೊರೆಗಳನ್ನು ಸ್ವೀಕರಿಸಿ ಗಾಯನ ಮಾಡುವ ಪ್ರವೃತ್ತಿಯನ್ನು ಕಾಣಬಹುದು. ಆದ್ದರಿಂದ ಇವರನ್ನು ಅರೆವೃತ್ತಿಗಾಯಕರಲ್ಲಿ ಸೇರಿಸಿ ಅಧ್ಯಯನಕ್ಕೆ ಒಳಪಡಿಸಿದೆ. 'ಭಜನೆ' ಎನ್ನುವ ಪದವು ಸಂಸ್ಕೃತದ 'ಭಜ್' ಎಂಬ ಪದದಿಂದ ಬಂದಿವೆ. ಇದರ ಅರ್ಥ ಸೇವೆಮಾಡು, ಆಶ್ರಯಿಸು, ಪೂಜೆಮಾಡು, ಅರ್ಥವನ್ನು ಸೂಚಿಸುತ್ತದೆ. ಭಜನೆಯು ಪರಮಾತ್ಮನ ಧ್ಯಾನದ ಮೂಲಕ ಅವನ ಸಾನಿಧ್ಯಕ್ಕೆ ಕೊಂಡೊಯ್ಯುವ ಶಕ್ತಿ ಹೊಂದಿದ ಮೂರ್ತ ಕಲಾ ಶಕ್ತಿಯೆಂದು ನಂಬಿದ್ದಾರೆ.

ನಾಯಕನಹಟ್ಟಿ ವ್ಯಾಪ್ತಿಯಲ್ಲಿನ ಎಲ್ಲಾ ಗ್ರಾಮಗಳಲ್ಲಿ ಭಜನೆ ತಂಡಗಳಿರುವುದನ್ನು ಕಾಣಬಹುದು. ಇದಕ್ಕೆ ಕಾರಣ ಇವರೆಲ್ಲಾ ಕೃಷಿಕರು, ಕೂಲಿಕಾರ್ಮಿಕರಾಗಿದ್ದು, ತಮ್ಮ ದೈಹಿಕ, ಮಾನಸಿಕ, ವಿಶ್ರಾಂತಿಗಾಗಿ, ದೈವದ ಆರಾಧನೆಗಾಗಿ, ದೇವರನ್ನು ಧ್ಯಾನಿಸುತ್ತಾ ಮುಕ್ತಿಪಡೆಯಬಹುದೆಂಬ ದೃಢನಂಬಿಕೆಯಿಂದ ಭಜನೆ ಆಚರಣೆಯಲ್ಲಿದೆ. ಇಲ್ಲಿನ ಬುಡಕಟ್ಟು ಸಂಸ್ಕೃತಿಯ ಸಮುದಾಯಗಳಾದ ಮ್ಯಾಸಬೇಡರು, ಗೊಲ್ಲರು, ಲಂಬಾಣಿಗಳು ಹಾಗೂ ಆದಿಕರ್ನಾಟಕ, ಭೋವಿ, ಕುರುಬರು, ಕುಂಬಾರ ಮೊದಲಾದ ಜಾತಿಸಮುದಾಯಗಳು ಯಾವುದೇ ಬೇಧವಿಲ್ಲದೆ ಸಾಮೂಹಿಕವಾಗಿ ಹಾಡುವುದರ ಮೂಲಕ ಭಾವೈಕ್ಯತೆಯನ್ನು ಸಾರುತ್ತಾರೆ. ಇಲ್ಲಿ ನಡೆಯುವ ಜಾತ್ರೆ ಉತ್ಸವ, ಸ್ಥಳೀಯ ಹಬ್ಬ, ಹರಿದಿನಗಳು, ಹೊಲಮನೆಗಳ ಕಾರ್ಯಗಳಲ್ಲಿ ಆಹ್ವಾನದ ಮೇರೆಗೆ ಭಾಗವಹಿಸಿ ಹಾಡಿ, ಅವರಿಂದ ಹಣ, ಕಾಣಿಕೆಗಳನ್ನು ಸ್ವೀಕರಿಸಬಹುದು, ಇರದಿರಬಹುದು ಆದರೆ ತಮ್ಮ ಜ್ಞಾನಪರಂಪರೆಯನ್ನು ವರ್ಗಾಯಿಸಿ, ಅದು ಶಾಶ್ವತವಾಗಿ ಉಳಿಯುವಂತೆ ಮಾಡುವ ಕಾರ್ಯ ಅನನ್ಯವಾದುದು.

### ಭಜನೆ ತಂಡದ ರಚನೆ ಮತ್ತು ಮೇಳಗಾರಿಕೆ :

ಯಾವುದೇ ಧಾರ್ಮಿಕ ಕಟ್ಟು ಪಾಡುಗಳಿಗೆ ಒಳಗಾಗದೆ ಎಲ್ಲಾ ಜಾತಿಯವರು ಭಜನೆ ತಂಡದಲ್ಲಿರುವುದನ್ನು ಕಾಣಬಹುದು. "ಜಾನಪದ ನೆಲೆಯಿಂದ ಹುಟ್ಟಿಬಂದ ಭಜನೆಯ ಮುಖ್ಯ

ಉದ್ದೇಶ 'ಮುಕ್ತಿ' ಭಜನೆಗೆ ಹೋಗೋಣ ಗೆಳೆಯ ಬೇಗನೆ ಬಾರೋ, ಬೇಗನೆ ಬಾರೋ ಆಗೂನು ಉದ್ಧಾರೋ... ಬಲ್ಲವಾರ್‍ರು, ಗೆಳೆಯ ನೀನು ಹಿಡಿ ನನ್ನ ಪದರ, ಹಿಡಿ ನನ್ನ ಪದರ ನಡಿ ಮುಕ್ತಿಗಿದರ' ಜ್ಞಾನ ಒಂದೇ ಸಾಕು ಮುಕ್ತಿಗೆ... ನಿನ್ನ ಕಡಿಗಿ ಇನ್ನಾರು ಇಲ್ಲಂದೆ ಮುಕ್ತಿಯನ್ನು ತಿಳಿದು ಪಡಿಯೆಂದೆ"[೬] ಎಂದು ನಮ್ಮ ಗ್ರಾಮೀಣ ಜನರಲ್ಲಿ ಇಂದಿಗೂ ಭಜನೆಯಲ್ಲಿ ಭಾಗವಹಿಸಿ, ದೇವರ ಧ್ಯಾನವನ್ನು ಮಾಡಿ, ತಮ್ಮ ಪಾಪ ಕಾರ್ಯಗಳಿಂದ ಮುಕ್ತಿ ಪಡೆಯೋಣ ಎಂಬ ನಂಬಿಕೆ ಬಲವಾಗಿದೆ. ಭಜನೆ ಮೇಳದಲ್ಲಿ ಸ್ವಸಂತೋಷಕ್ಕಾಗಿ ಆಸಕ್ತಿ ಇರುವವರೆಲ್ಲರು ಭಾಗವಹಿಸಿದರೂ ಅದರಲ್ಲಿ ನುರಿತ, ಅನುಭವಿಗಳು ಸೇರಿ ಒಂದು ಭಜನೆ ತಂಡವನ್ನು ರಚಿಸಿಕೊಂಡು ತಮ್ಮ ಬಿಡುವಿನ ವೇಳೆಯಲ್ಲಿ ಹಾಗೂ ವಿಶೇಷ ಸಂದರ್ಭಗಳಲ್ಲಿ ಬೇರೆಯವರ ಆಹ್ವಾನದ ಮೇರೆಗೆ ಹೋಗಿ ಭಜನೆಮೇಳವನ್ನು ನೀಡಿ ಬರುವರು. ಸಾಮಾನ್ಯವಾಗಿ ಭಜನೆಮೇಳದಲ್ಲಿ ಸುಮಾರು ೧೦ ರಿಂದ ೧೫ರ ವರೆಗೂ ಕಲಾವಿದರಿರುತ್ತಾರೆ. ಇತ್ತೀಚಿಗೆ ನಾಯಕನಹಟ್ಟಿಯ ವ್ಯಾಪ್ತಿಯಲ್ಲಿ ಅವಧೂತ ಪರಂಪರೆಯ ಭಕ್ತರ ಪ್ರತೀಕ ಭಜನೆ ತಂಡಗಳಿದ್ದು, ಅವರು ಆ ಮಠದ ಗುರುಗಳಿಂದ ಗುರುಭಜನೆ ಅಥವಾ ದೀಕ್ಷೆ ಪಡೆದು, ಆ ಒಕ್ಕಲಿನವರಾಗಿ ಪ್ರತಿ ಸೋಮವಾರ, ಗುರುವಾರ ಪೂಜೆಮಾಡಿ ಭಜನೆ ಮಾಡುವುದು ಕಡ್ಡಾಯವಾಗಿದೆ. ಇವರು ಒಂದುರೀತಿಯ ಆಧ್ಯಾತ್ಮಿಕ ಜೀವನವನ್ನು ನಡೆಸುವುದನ್ನು ಕಾಣಬಹುದು. ಅವಧೂತರ ಮಠಕ್ಕೆ ಸಂಬಂಧಿಸಿದ ಧಾರ್ಮಿಕ ಕಾರ್ಯಗಳಲ್ಲಿ ಹೊಸಬರಿಗೆ, ದೀಕ್ಷೆ ನೀಡುವಾಗ ತಪ್ಪದೆ ಹೋಗುತ್ತಾರೆ ಮತ್ತೆ ತಮ್ಮ ಮಠದ ಗುರುಗಳನ್ನು ಆಹ್ವಾನಿಸಿ, ವಿಶೇಷ ಗೌರವಗಳೊಂದಿಗೆ ಪೂಜಿಸಿ, ಭಜಿಸುವುದನ್ನು ಕಾಣಬಹುದು. ಭಜನೆ ಮೇಳ ಸಾಮಾನ್ಯ ಸಂದರ್ಭಗಳಲ್ಲಿ ರಾತ್ರಿಯ ಸಮಯದಲ್ಲಿ ೨ ರಿಂದ ೩ ತಾಸುಗಳವರೆಗೂ ಮೇಳ ಪ್ರದರ್ಶನವನ್ನು ಮಾಡುವುದನ್ನು ಕಾಣಬಹುದು. ವಿಶೇಷ ಸಂದರ್ಭಗಳಲ್ಲಿ ಅಂದರೆ ಜಾತ್ರೆ, ಹಬ್ಬ-ಹರಿದಿನ, ಉತ್ಸವ, ಸ್ಥಳೀಯ ಹೊಲಮನೆಗಳ ಶುಭಕಾರ್ಯಗಳ ಸಂದರ್ಭದಲ್ಲಿ ಸಾವಿನಸೂತಕ ಸಂದರ್ಭದಲ್ಲಿ ಇವರು ಸತತವಾಗಿ ರಾತ್ರಿಯಲ್ಲಾ ಭಜನೆ ಮಾಡುತ್ತಾರೆ.

ಈ ಸಂದರ್ಭದಲ್ಲಿ ಅವರು ಮೇಳವನ್ನು ಏರ್ಪಡಿಸುವುದರ ಮೂಲಕ ದೈವದ, ಭಯಭಕ್ತಿ, ಹಾಸ್ಯ, ವಿಡಂಬನೆ, ತಾರ್ಕಿಕತೆ, ಅಮೂರ್ತತೆ, ಸಂಸಾರಿಕ, ಸಾಮಾಜಿಕ, ಪ್ರಸ್ತುತ ಸಮಸ್ಯೆಗಳ ಕಥಾ ವಸ್ತುವನ್ನು ಒಳಗೊಂಡ ವಿಷಯದ ಮೇಲೆ ಹಾಡುಗಳನ್ನು ಹಾಡುತ್ತಾರೆ. ತಮ್ಮ ನಿರೂಪಣೆಯನ್ನು ಮುಖ್ಯಗಾಯಕನು, ತನ್ನ ಹಿಮ್ಮೇಳದವರೊಂದಿಗೆ ಪ್ರಾರಂಭಿಸಿ, ಕಥೆಯ ನಡುನಡುವೆ ಉಪಕಥೆಗಳನ್ನು, ಒಗಟು ಒಡಪುಗಳನ್ನು ಹೇಳುತ್ತಾ ಶ್ರೋತೃವರ್ಗದವರನ್ನು ನಿದ್ರೆ ಮಾಡದಂತೆ ಎಚ್ಚರವಾಗಿರುವುದರ ಮೂಲಕ ತಮ್ಮ ಮೇಳವನ್ನು ಅಸ್ವಾದಿಸುವಂತೆ ಮಾಡುವ ಕಲಾನೈಪುಣ್ಯತೆ ಅವರಿಗಿದೆ. ಭಜನೆ ಮೇಳವನ್ನು ಪ್ರಾರಂಭಿಸುವಾಗ ಗಣೇಶನ ಶಿವನ ಮೇಲೆ ಕುರಿತು ಪ್ರಾರ್ಥನೆಯೊಂದಿಗೆ ಮೇಳವನ್ನು

ಪ್ರಾರಂಭಿಸಿ ಹರಹರಮಹಾದೇವ ಎಂದು ಮುಕ್ತಾಯ ಮಾಡುವರು, ಇವರು ತಮ್ಮ ಮೇಳದಲ್ಲಿ ಏಕತಾರಿ, ದಮ್ಮಡಿ, ತಾಳ, ತಬಲ, ಹಾರ್ಮೋನಿಯಂಗಳನ್ನು ಬಳಸುತ್ತಾ, ಮೇಳದ ಸೊಬಗನ್ನು ಹೆಚ್ಚಿಸುತ್ತಾರೆ. ಇವರು ಆಧ್ಯಾತ್ಮಿಕ, ಪಾರಮಾರ್ಥಿಕ ಕುರಿತ ತತ್ವಪದಗಳಲ್ಲಿ ಕೀರ್ತನೆಗಳು, ಸಾಮಾಜಿಕ, ಐತಿಹಾಸಿಕ, ಸ್ಥಳೀಯ ಸಾಂಸ್ಕೃತಿಕ ಗಾಯಕರು, ಪವಾಡಪುರುಷರು (ಅವಧೂತರು) ಕುಲದೇವರಗಳ ಮೇಲೆ ಗಾಯನ ಮಾಡುತ್ತಾರೆ. ಇವರು ತಮ್ಮ ಹಾಡುಗಳನ್ನು ಹಿರಿಯರಿಂದ ಕಿರಿಯರಿಗೆ ವರ್ಗಾಯಿಸುವುದರ ಮೂಲಕ ಮೌಖಿಕ ಪರಂಪರೆಯನ್ನು ಉಳಿಸಿ ಬೆಳೆಸುವ ಕಾರ್ಯ ಮಾಡುತ್ತಾ, ಮೇಳವನ್ನು ನೀಡುತ್ತಾ, ಸಾಮಾಜಿಕರು ನೀಡುವ ಕಾಣಿಕೆ ಉಡುಗೊರೆಗಳನ್ನು ಸ್ವೀಕರುಸುವರು. ಒಟ್ಟಿನಲ್ಲಿ ಜನರು ಕೊಟ್ಟರೂ, ಕೊಡದಿದ್ದರು ತಾವು ಕಲಿತ ಮೌಖಿಕ ಪರಂಪರೆಯನ್ನು ಸಮಾಜದ ಒಳಿತಿಗೆ, ಸಂಸ್ಕೃತಿ ಉಳಿವಿಗೆ ಮೀಸಲಿಡುವುದರ ಮೂಲಕ ಸಂಚಾರಿ ಮಾಧ್ಯಮಗಳಾಗಿ ಕಾರ್ಯನಿರ್ವಹಿಸುವರು.

ವಾದ್ಯಪರಿಕರಗಳು, ಭಜನೆ ಮೇಳದವರು ತಮ್ಮ ಮೇಳಕ್ಕೆ ಸಂಗೀತ, ಆಂಗಿಕ ಅಭಿನಯ, ಲಯ ರಾಗಗಳಿಗೆ ಬುನಾದಿಯಾಗಿರುವುದು ಅವರು ಬಳಸುವ ವಾದ್ಯಗಳಾದ ಏಕತಾರಿ, ದಮ್ಮಡಿ, ತಾಳ, ಚಿಟಿಕೆ, ಮದ್ದಳೆ ಮೊದಲಾದವು

**ಭಜನೆ ಹಾಡುಗಳ ಸಾಹಿತ್ಯಿಕ ಮೌಲ್ಯ**

ಮೌಖಿಕ ಪರಂಪರೆಯನ್ನು ಅತಿ ಹೆಚ್ಚಾಗಿ ಕಂಡು ಬರುವ ಭಜನೆ ಹಾಡುಗಳು ಆಡುಮಾತಿನ ಮೂಲಕ ಕಂಠಸ್ಥರೂಪದಲ್ಲಿ ರಾಗ, ಲಯಬದ್ಧವಾಗಿ ಹಾಡುವ, ಹಾಡುಗಳಲ್ಲಿ ಭಕ್ತಿ, ಭಾವ, ದೈವಿಶ್ರದ್ಧೆ, ನಿಷ್ಠೆ, ಭಯ, ತ್ಯಾಗ, ಶುದ್ಧತೆ, ಮುಕ್ತಿ ಮೊದಲಾದ ಅಂಶಗಳನ್ನು ಕುರಿತ ಆಧ್ಯಾತ್ಮಿಕ, ಪಾರಮಾರ್ಥಿಕ, ಲೌಕಿಕ ನಿರಾಕರಣೆ, ಗುರು-ಶಿಷ್ಯರ ಮೋಕ್ಷ ಪರಿಕಲ್ಪನೆ, ಬದುಕಿನ ವಾಸ್ತವ ಕುರಿತ ತತ್ವಗಳು, ಕೀರ್ತನೆಗಳು, ಒಗಟು, ಒಡಪು, ವಚನ, ಗಾದೆ, ಮೊದಲಾದವುಗಳ ಕುರಿತ ಸಾಹಿತ್ಯವನ್ನು ಗುರುತಿಸಬಹುದು.

"ಗುರುವನು ಸ್ತುತಿಸುವ ಮೊದಲಿನಲೀ
ವರ ಪಂಚಾಕ್ಷರಿ ಜಪಿಸುತಲಿ
ತನ್ನೊಳು ತಾನು ತಿಲಿಯುತಲಿ
ಉದ್ಮನೆ ಘನ ಪೀಠ ಏರುತಲಿ" ॥ಪ॥[೭]

ಭಜನೆಯ ಪ್ರಾಂಭದಲ್ಲಿ ಗಣಸ್ತುತಿ ಇಲ್ಲಿವೆ ಗುರುವಿನ ಸ್ತುತಿಯೊಂದಿಗೆ ಭಜನೆ ಪ್ರಾರಂಭಿಸಿ ಗುರುಸೇವೆಯನ್ನು ಮಾಡುತ್ತಾ ತನ್ನ ಆತ್ಮವನ್ನು ಶುದ್ಧಿಗೊಳಿಸಿಕೊಂಡು ಮುಕ್ತಿ ಪಡೆಯಲೆಂದು ಗುರು-ಶಿಷ್ಯರ ಸಂಬಂಧವನ್ನು ಗುರುತಿಸುತ್ತದೆ.

"ಭಜನೆ ಮಾಡುಬೇಕು, ರುಜನ ಕಳೆಯಬೇಕು

ಕುಜನರ ಸಂಗದಿ ದೂರರಿಬೇಕು, ಸುಜನರ ಸಂಗತಿ ಸುಲಿಯಬೇಕು"೮

ಭಜನೆಯ ದೇವರನ್ನು ಧ್ಯಾನಿಸಿ, ಪಾಪಕರ್ಮಗಳಿಂದ ಮುಕ್ತಿ ಪಡೆಯವ ಮಾರ್ಗವಾಗಿದ್ದು ನಿತ್ಯ ಭಜನೆ ಮಾಡುತ್ತಾ, ದುಷ್ಟರಿಂದ ದೂರವಿದ್ದು, ಸಜ್ಜನರ ಸಹವಾಸ ಮಾಡಬೇಕೆಂದು ಬಸವಣ್ಣನವರ ವಚನ ಅದನ್ನು ಇದು ನೆನಪಿಸುತ್ತದೆ

ಅವಧೂತ ಪುರುಷ ಉಕ್ಕಡಗಾತ್ರಿಯ ಕರಿಬಸವೇಶ್ವರನನ್ನು ಕುರಿತ ಹಾಡನ್ನು ಗುರುತಿಸಿದೆ.

"ಹ್ಯಾಂಗ ಮರೆಯಲವ್ವ ಗುರು ಕರಿಬಸವೇಶನ ॥ಪ॥

ಕುಂತು ನಿಂತಲ್ಲಿ ಪವಾಡ ಮಾಡಿ ತೋರಿದನಾವ್ವ

ಅಂತರಂಗದೊಳಗೆ ಬಂದು ಚಿಂತೆ ದೂರ ಮಾಡಿದನವ್ವಾ ॥ಪ॥

ಎಂಟು ದಿಕ್ಕುನೊಳಿಗೆ ಈತ ಜಗವೆಲ್ಲಾ ತುಂಬಿದನಾವ್ವ

ಜಗದ್ಗುರು ಜಂಗಮಗಿತ ಪವಾಜ ಪುರುಷನಾದವ್ವ ॥ಪ॥

ಕಂಬಳಿಯ ಗದ್ದುಗೆಯ ಮೇಲೆ

ತುಂಬಿದ ಹೊಳೆಯ ಧಾಟಿದನಾವ್ವ

ಪುಣ್ಯ ಭೂಮಿ ಉಕ್ಕಡಗಾತ್ರಿ ಸ್ಥಿರವಾಗಿ ನೆಲೆಸಿದಾನಾವ್ವ ॥ಪ॥

ಉಕ್ಕಡಗಾತ್ರಿ ಅಜ್ಜಯ್ಯನು ದಾವಣಗೆರೆ, ಹಾವೇರಿ, ಚಿತ್ರದುರ್ಗ ಜಿಲ್ಲೆಯ ಗ್ರಾಮೀಣ ಜನತೆಯ ಆರಾಧ್ಯ ದೈವನಾಗಿ, ತನ್ನ ಪವಾಡಗಳಿಂದ, ದೆವ್ವ, ಪಿಶಾಚಿ, ಕಂಟಕಗಳನ್ನು, ರೋಗ ರುಜಿನಿಗಳನ್ನು ದೂರ ಮಾಡುತ್ತಾನೆಂಬ ದೈವ ಭಕ್ತಿಯನ್ನು, ಶ್ರದ್ಧೆಯಿಂದ ಆ ದೈವದ ಒಕ್ಕಲಿಗರಾಗಿ ಸ್ವಾಮಿ ಅಜ್ಜಯ್ಯನ ಮಹಿಮೆಯನ್ನು ಕುರಿತು ಹಾಡನ್ನು ದೈವದ ಭಕ್ತಿಗೆ ಪಾತ್ರರಾಗಿ, ಅಲ್ಲಿನ ಧಾರ್ಮಿಕೋತ್ಸವಾದಿಗಳಲ್ಲಿ ಭಾಗವಹಿಸಿ ತಮ್ಮ ಭಕ್ತಿ ಸೇವೆಯನ್ನು ಸಲ್ಲಿಸಿ ದೇವರ ಇಷ್ಟಾರ್ಥಕ್ಕೆ ಪಾತ್ರರಾಗುತ್ತಾರೆ. ತಮ್ಮ ಗ್ರಾಮಗಳಲ್ಲಿ ಇರುವ ಅಜ್ಜಯ್ಯನ ಗುಡಿಗಳಲ್ಲಿ ನಡೆಯುವ ಧಾರ್ಮಿಕ ಕಾರ್ಯಗಳಲ್ಲಿ ಭಾಗವಹಿಸಿ ದೇವರ ಪವಾಡಗಳನ್ನು ಕುರಿತು ಹಾಡುವುದನ್ನು ಕಾಣಬಹುದು.

"ರಾಮದುರ್ಗದ ಗ್ರಾಮಕ್ಕೆ ಹೋಗೋಣ ಬಾರಮ್ಮ ತಂಗಿ

ರಾಮದುರ್ಗದೊಳಗೆ ಕಾಶಿರಾಮೇಶ್ವರನ ನೋಡಿ

ಕಾಶಿರಾಮೇಶ್ವರನ ನೋಡಿ, ಕರ್ಮವ ಕಳೆಯಾನ ತಂಗಿ" ॥ಪ॥

ಭಜನೆಯವರು ತತ್ವಪದಗಳು, ಕೀರ್ತನೆಗಳನ್ನು ಹೆಚ್ಚಾಗಿ ತಮ್ಮ ಹಾಡುಗಳಲ್ಲಿ ಬಳಸಿದರೂ ಸ್ಥಳೀಯ ದೇವರಗಳನ್ನು, ಸಾಮಾಜಿಕ ಸಂಗತಿಗಳನ್ನು ಕುರಿತು ಸ್ವತಃ ಸಂದರ್ಭಕ್ಕೆ ತಕ್ಕಂತೆ ಹಾಡನ್ನು ರಚಿಸಿ, ಗಾಯನ ಮಾಡುವ ಸೃಜನಶೀಲತೆ ಅವರಲ್ಲಿರುತ್ತದೆ. ಮೇಲಿನ ಹಾಡನ್ನು ನಿರಕ್ಷರ

ಕುಡಿಯಾದ ರಾಮದುರ್ಗ ಗ್ರಾಮದ ಅಂಧ ಎ.ಕೆ. ಮಲ್ಲೇಶಪ್ಪಾ ರಚಿಸಿದ್ದಾನೆ. ಈ ಗ್ರಾಮದಲ್ಲಿರುವ ಹಟ್ಟಿಮಲ್ಲಪ್ಪನಾಯಕನ ಕಾಲದಲ್ಲಿ ಕಟ್ಟಲಾದ ಏಕಶಿಲಾ ಗುಹಾಂತರ ದೇವಾಲಯವಿದ್ದು, ಶಿವನಲಿಂಗ, ಬಸವಣ್ಣ, ೩ ಸುತ್ತಿನ ಕೋಟೆಯಿಂದ ಕೂಡಿದ್ದು, ಹಟ್ಟಿ ಜಾತ್ರೆಗೆ ಬರುವ ಭಕ್ತರೆಲ್ಲಾ ಇಲ್ಲಿಗೆ ಬಂದು ತಮ್ಮ ಇಷ್ಟಾರ್ಥಗಳ ಈಡೇರಿಕೆಗಾಗಿ, ಹರಕೆಗಳನ್ನು ತೀರಿಸುತ್ತಾರೆ. ಇಲ್ಲಿ ವಿಶೇಷವಾಗಿ ಮಹಾಶಿವರಾತ್ರಿ, ಶ್ರಾವಣಮಾಸದಲ್ಲಿ ಭಜನೆಯನ್ನು ಇಲ್ಲಿನ ಗ್ರಾಮದ ಜನತೆ ಏರ್ಪಡಿಸಿ ತಮ್ಮ ದೈವಿಕ, ಭಯ ಭಕ್ತಿಯನ್ನು ವ್ಯಕ್ತಪಡಿಸುತ್ತಾರೆಂಬುದನ್ನು ಈ ಹಾಡಿನ ಹಿನ್ನೆಲೆಯಲ್ಲಿ ಗಮನಿಸಬಹುದು. ಸ್ಥಳೀಯ ದೇವರುಗಳ ಕುರಿತು ಪ್ರತಿಯೊಂದು ಗ್ರಾಮಗಳಲ್ಲಿ ಹಾಡು ಹಾಡುವುದು ಕಾಣಬಹುದು.

ಒಗಟು ರೀತಿಯ ಭಜನೆಯ ಹಾಡೊಂದನ್ನು ಇಲ್ಲಿ ಗುರುತಿಸಲಾಗಿದೆ.

"ಒಂದು ಕಾಲಲಿ ಹುಟ್ಟಿ, ಒಂದು ಕಾಲಲಿ ಬೆಳೆದು
ನಿಂತು ಮುತ್ತಿನ ಚೆಂಡು ಥಳ ಥಳವೇ ಹೊಳೆಯುವುದು
ನುಡಿ ಕೇಳಿರಿ ಓಂನಮಃ ಶಿವಾಯ ನುಡಿ ಕೇಳಿರಿ ॥ಪ॥
ಹಸಿರು ಸೀರೆಯನ್ನುಟ್ಟು ಎಂಬತ್ತು ಸಿರಿಗೈದು
ಗಂಡನಿಲ್ಲದ ಬಾಲೆ ಬಸರುರಾಳೆಂಬ ಸುದ್ದಿ
ನುಡಿ ಕೇಳಿರಿ ಓಂನಮಃ ಶಿವಾಯ ನುಡಿ ಕೇಳಿರಿ ॥ಪ॥
ಗುಡಿಯಾಗ ಇರುವುದು ಘಮ ಘಮ ಅನಿಸುವುದು
ಹೋಗಿ ಬರುವರೆನ್ನೆಲ್ಲಾ ಆನಂತ ಪಡಿಸುವುದು
ನುಡಿ ಕೆಲಿರಿ ಓಂನಮಃ ಶಿವಾಯ ನುಡಿ ಕೇಳಿರಿ"॥ಪ॥

ಪ್ರಶ್ನೋತ್ತರ ಮೂಲಕ ಹಾಡುತ್ತಾ ಜೋಳದ ತೆನೆ, ಕ್ಯಾದಿಗೆ ತೆನೆ, ಊದಿನ ಕಡ್ಡಿಯನ್ನು ಕುರಿತು ಹೋಲಿಕೆ, ವರ್ಣನೆಯೊಂದಿಗೆ, ದೈವದ ಉಚ್ಚಾರದೊಂದಿಗೆ ಹಾಡುತ್ತಾ, ಕೊನೆಯಲ್ಲಿ ಅವುಗಳ ಅರ್ಥವನ್ನು ಬಿಡಿಸುವುದನ್ನು ಗುರುತಿಸಬಹುದು.

ತಾರ್ಕಿಕತೆಯನ್ನು ಕುರಿತ ಹಾಡನ್ನು ಗುರುತಿಸಿದೆ.

"ಬಿಟ್ಟು ಹೋದಾನಂದರೆ ಸಿಗದು ಮೋಟಾರು
ಬಹಳ ಸಣ್ಣವನವ್ವ ಡ್ರೈವರ
ಇದರ ಕುಂತು ನಡೆಸುತ್ತಾನಾ ಮೋಟಾರು
ಪೇಟ್ರೋಲ್ ಹಾಕಿದನಾವ್ವ ತಂಗಿ ಬಲ್ಲವರು
ಶಾಹಿ ತಿರುವನು ತಂಗಿ ಡ್ರೈವರಾ
ಪೇಟ್ರೋಲ್ ಮುಗಿಯತೆ? ಪಂಚರ್ ಆಯಿತೆ?

ನಡು ದಾರಿಯಲ್ಲಿ ಆಯಿತು ಪಂಚರ್
ಅದರ ಸಲುವಾಗಿ ಯಾರಾರು ಇಲ್ಲದಂತಾಯಿತು
ಇದರ ಸಲುವಾಗಿ ಬೇಸರ ಎದ್ದು
ಹೊಲ್ಪ ತಂಗಿ ಡ್ರೈವರ"॥ಪ॥
"ಆರು ಗಾಲಿಯ ಮೂರು ಯಂತ್ರದ
ಇದರೊಳಗೆ ತಂಗಿ ಒಂದು ತಂತರ
ಆ ತಂತರವನ್ನು ತಿಳಿದವನು ಬಲ್ಲುರ
ತಂತರವನು ತಿಳಿಯದವನು ದುರುಗವ್ವನ
ಮಾರವ್ವನು, ಚೌಡವ್ವನ ಕೋಮ"॥ಪ॥
"ಸಾಕಾಯಿತಾ ತಂಗಿ ಈ ಊರು
ನವಿಲುಗೊಂದು ಎಂಬುದು ದೊಡ್ಡ ಸಾಗರ
ಅಲ್ಲಿ ನಾಗಲಿಂಗ ಸ್ವಾಮಿ ಗುರುವರ
ಅವರ ಪಾದ ವಿಡುವ ತಂಗಿ ಪರಂಪರೆ
ಗುರು ಮುಕ್ತಿಯಾಗುವುದು ಬಹು ಸರ ಸರ" ॥ಪ॥

ಜೀವನದ ನಶ್ವರತೆ, ಲೌಕಿಕಕತೆಯ ನಿರಾಕರಣೆ, ಮುಕ್ತಿಯ ಸಾಧನೆಗಳಿಗಾಗಿ ಗುರುವಿನ ಆಶ್ರಯ ಪಾರಮಾರ್ಥಿಕ ಚಿಂತನೆಯಿಂದ ಗುರುವಿನ ಸಾನಿಧ್ಯ ಪಡೆಯಬಹುದೆಂದು, ಲೋಕಾನುಭವ, ಆತ್ಮಾನುಭವದ ಹಿನ್ನೆಲೆಯನ್ನು ಕಾಣಬಹುದು. ಭಜನೆ ಮೇಳದವರು ಆಧ್ಯಾತ್ಮಿಕ ಉನ್ನತಿಗಾಗಿ, ಮೋಕ್ಷ, ಮುಕ್ತಿ ಹೊಂದುವುದಕ್ಕಾಗಿ, ಸಮಾಜದ ಒಳಿತಿಗಾಗಿ, ದೈವನ್ನು ಕುರಿತು ಧ್ಯಾನಿಸುವ ಹಿನ್ನೆಲೆಯನ್ನು ಅವರ ಮೌಖಿಕ ಪರಂಪರೆಯಲ್ಲಿ ಕಾಣಬಹುದು.

**೪ ೩. ಬಯಲಾಟ ಮೇಳದವರು (ಭಾಗವತರು) :**

ಜನಪದ ಕಲೆಗಳು ನಮ್ಮ ಸಂಸ್ಕೃತಿಯ ಅವಿಭಾಜ್ಯ ಅಂಗವಾಗಿದೆ. ಈ ಕಲೆಗಳಲ್ಲಿ ಮೂಡಲಪಾಯ ಪ್ರದರ್ಶನಾತ್ಮಕ ಕತೆಗಳಲ್ಲಿ ಗುರುತಿಸಿಕೊಂಡಿರುವ ಬಯಲಾಟ ನಾಯಕನಹಟ್ಟಿ ವ್ಯಾಪ್ತಿಯಲ್ಲಿ ಹೆಚ್ಚು ಕಂಡುಬರುತ್ತದೆ. ಪ್ರತಿಯೊಂದು ಗ್ರಾಮದಲ್ಲಿ ಬಯಲಾಟದ ಕಲಾವಿದರನ್ನು ಕಾಣಬಹುದು. ಮೌಖಿಕ ಪರಂಪರೆಯ ಪ್ರಚಾರಕಾಗಿ ಬಯಲಾಟ ಮೇಳಗಾರರು (ಭಾಗವತರು) ತಮ್ಮ ವೃತ್ತಿಯ ಜೊತೆಗೆ ಬಯಲಾಟಕ್ಕೆ ತಮ್ಮ ಸೇವೆಯನ್ನು ಮುಡಿಪಿಟ್ಟು ಪ್ರತಿಫಲವಾಗಿ ಒಂದಿಷ್ಟು ಹಣ, ಉಡುಗೊರೆಗಳನ್ನು ಸ್ವೀಕರಿಸುತ್ತಾ ಕಲಾಸೇವೆ ಮಾಡುವ ಇವರನ್ನು ಅರೆವೃತ್ತಿಗಾಯಕರ ವರ್ಗಕ್ಕೆ ಸೇರಿಸಿ ಅಧ್ಯಯನಕ್ಕೆ ಒಳಪಡಿಸಿದೆ.

ನಮ್ಮ ಜನಪದರು ದೇವರು, ದಿಂಡರು, ಪ್ರಕೃತಿಯ ನಾನಾ ಸ್ವರೂಪಗಳಲ್ಲಿ ಅಪಾರ ನಂಬಿಕೆಯಿಟ್ಟು ತಮ್ಮ ಬದುಕಿನ ಆಗು-ಹೋಗುಗಳಿಗೆ ಅವು ಕಾರಣವೆಂದು ಜಾತ್ರೆ, ಉತ್ಸವ, ಹಬ್ಬ-ಹರಿದಿನಗಳನ್ನು ಆಚರಿಸುತ್ತಾ, ಈ ಶುಭ ಸಂದರ್ಭದಲ್ಲಿ ಮನರಂಜನೆಗಾಗಿ, ನೈತಿಕ, ಆಧ್ಯಾತ್ಮಿಕ ಸಂದೇಶ ಬಿತ್ತಲು ಪ್ರದರ್ಶನಾತ್ಮಕತೆಗಳನ್ನು ಏರ್ಪಡಿಸುವರು. ಈ ಕತೆಗಳಲ್ಲಿ ಬಯಲಾಟವು ಒಂದಾಗಿದ್ದು. ಇದನ್ನು ಊರಿನ ಬಯಲಿನ ವಿಶಾಲವಾದ ಜಾಗದಲ್ಲಿ ಅಟ್ಟಹಾಕಿ ಪದರ್ಶನ ಮಾಡುವುದರಿಂದ ಈ ಆಟಕ್ಕೆ ಬಯಲಾಟ ಎಂದು ಹೆಸರು ಬಂದಿದೆ.

ಈ ಆಟವನ್ನು ಆಡಿಸುವರು ವಿಶೇಷ ಪರಿಣಿತಿ, ಅನುಭವಿಗಳಾದ ಬಯಲಾಟದ ಮೇಳಗಾರರು (ಭಾಗವತರು) ತಮ್ಮ ಮೂಲ ವೃತ್ತಿಯ ಜೊತೆಗೆ ಕಲಾಸೇವೆಯನ್ನು ಮಾಡುತ್ತಾ. ಇದನ್ನು ಅರೆವೃತ್ತಿ ಮಾಡಿಕೊಂಡು ನಮ್ಮ ಪಾರಂಪರಿಕ ಜ್ಞಾನವನ್ನು ಪ್ರಸಾರ ಮಾಡುವರು.

**ಬಯಲಾಟ ಕಲಿಸುವ ವಿಧಾನ ಮತ್ತು ಪ್ರದರ್ಶನ :**

ವೃತ್ತಿಯಲ್ಲಿ ವಿಶೇಷ ಪರಿಣಿತಿ ಪಡೆದ ಈಗಾಗಲೆ ಜನಪ್ರಿಯನಾಗಿರುವ ಮೇಳಗಾರನನ್ನು ಯುವ ಆಟಗಾರರು ತಾವು ಅಂದುಕೊಂಡಂತೆ ತಮ್ಮ ಗ್ರಾಮದಲ್ಲಿ ನಡೆಯುವ ಜಾತ್ರೆ, ಉತ್ಸವ, ಹಬ್ಬ ಹರಿದಿನಗಳಲ್ಲಿ ಇವುಗಳಲ್ಲಿ ಯಾವುದಾದರು ಒಂದು ಶುಭ ಸಂದರ್ಭದಲ್ಲಿ ನಾಟಕ ಆಡುವ ಉದ್ದೇಶವಿದ್ದು, ತಾವು ಬಂದು ತಮಗೆ ನಾಟಕ ಕಲಿಸಿ, ಆಡಿಸಬೇಕೆಂದು ವೀಳ್ಯನೀಡಿ ಬರುವರು. ಮೇಳಗಾರನು ಆಟಕಲಿಸಲು ಕಥೆಯ ಆಧಾರದ ಮೆಲೆ ಸಮಯ ತೆಗೆದುಕೊಳ್ಳುವನು. ಸಾಮಾನ್ಯವಾಗಿ ಅಭ್ಯಾಸದ ಅವಧಿ ೧ ರಿಂದ ೩ ತಿಂಗಳವರೆಗೂ ನಡೆಯುತ್ತದೆ. ಈ ಅವಧಿಯಲ್ಲಿ ಮೇಳಗಾರನು ಆ ಗ್ರಾಮದಲ್ಲಿ ತಂಗಿದ್ದ ಮೊದಲ ರಾತ್ರಿ ನಾಟಕದ ಪುಸ್ತಕ ವಾದ್ಯ ಪರಿಕರಗಳನ್ನು ಪೂಜೆ ಮಾಡಿ ಸೇರಿದ ಎಲ್ಲರಿಗೂ ಕಾಯಿ, ಮಂಡಕ್ಕಿ ಹಂಚಿ ಪ್ರಾರ್ಥನೆಯೊಂದಿಗೆ ಪ್ರಾರಂಭಿಸುವರು. ನಂತರ ೨, ೩ ಗಂಟೆಗಳ ಕಾಲ ಪಾತ್ರಗಳ ಅನ್ವಯ ಅಭ್ಯಾಸ ನೀಡುವರು. ಈ ಸಮಯದಲ್ಲಿ ಅದೇ ಗ್ರಾಮದ ಹಳೆ ಕಲಾವಿದರು. ಮೇಳಗಾರನಿಗೆ ಹಿಮ್ಮೇಳದವರಾಗಿ ಸೊಲ್ಲು ನೀಡುವವರು. ಹೀಗೆ ಪ್ರತಿನಿತ್ಯ ರಾತ್ರಿ ೮ ರಿಂದ ೧ ಗಂಟೆಯವರೆಗೆ ತರಬೇತಿ ಅಥವಾ ಆಟ ಕಲಿಸುವವನು. ಈ ಸಂದರ್ಭದಲ್ಲಿ ಯಾವುದೆ ಪಾತ್ರಗಳನ್ನು ಗಂಡಸರೇ ನಿರ್ವಹಿಸಬೇಕಾಗುವುದರಿಂದ ಅವರಿಗೆ ವಿಶೇಷವಾಗಿ ಒತ್ತುನೀಡಿ ಅಭ್ಯಾಸ ಮಾಡಿಸುವವನು. ಒಟ್ಟಿನಲ್ಲಿ ಮೇಳಗಾರನು ಆಧುನಿಕ ಸಿನಿಮಾದ ನಿರ್ದೇಶಕನಂತೆ ತನ್ನ ಪಾತ್ರವಹಿಸುವನು, ಆ ನಾಟಕದ ಯಶಸ್ಸು ಅವನ ಮೇಲೆ ಅವಲಿಂಬಿತವಾಗಿರುತ್ತದೆ. ಕೊನೆಗೆ ಗೊತ್ತುಪಡಿಸಿದಂತೆ ಗ್ರಾಮದಲ್ಲಿ ನಡೆಯ ವಿಶೇಷ ಸಂದರ್ಭದಲ್ಲಿ ಅಂದು ಬೆಳಿಗ್ಗೆ ನಾಟಕದ ಕಾರ್ಯಗಳಿಗೆ ಆಟಗಾರರು ಚಾಲನೆ ನೀಡಿ ಅಟ್ಟವನ್ನು ನಿರ್ಮಿಸುವರು. ರಾತ್ರಿ ೯ ಗಂಟೆಗೆ ನಾಟಕಕ್ಕೆ ಆ ಗ್ರಾಮದ ದೇವಸ್ಥಾನದಲ್ಲಿ ಪೂಜೆ ಸಲ್ಲಿಸಿ, ಪ್ರಾರ್ಥನೆಯೊಂದಿಗೆ ನಾಟಕ ಪ್ರಾರಂಭಿಸುವರು.

ಈ ಸಂದರ್ಭದಲ್ಲಿ ಬಹಳ ಖುಷಿಯಿಂದ ಗ್ರಾಮದ ಜನತೆ ಭಾಗವಹಿಸಿ ತಮ್ಮ ಪ್ರೋತ್ಸಾಹವನ್ನು ಸೂಚಿಸುತ್ತಾರೆ. ನಾಟಕದ ಆರಂಭದಲ್ಲಿ ಗೋಪಾಲನ ಪಾತ್ರ ಆಗಮನದೊಂದಿಗೆ ಪ್ರಾರಂಭವಾಗಿ ಅನಂತರ ನಾಟಕದ ಮುಖ್ಯ ಪಾತ್ರಗಳು ಅಟ್ಟದ ಮೇಲೆ ಬಂದು ತಮ್ಮ ಪಾತ್ರ ನಿರ್ವಹಣೆ ಮಾಡಿ ಹೋಗುತ್ತಾವೆ. ಈ ಸಂದರ್ಭದಲ್ಲಿ ಮೇಳಗಾರನ ಕಥಾನಿರೂಪಣೆ, ಸಂಭಾಷಣೆ ರೀತಿ ಮೆಚ್ಚಲೇಬೇಕಾದದು. ನಡು, ನಡುವೆ ಸಾರಥಿಯ ಹಾಸ್ಯ ಪ್ರಸಂಗ ಪ್ರೇಕ್ಷಕರನ್ನು ನಗೆ ಕಡಲಲ್ಲಿ ಮುಳಗಿಸುತ್ತದೆ.

ಬೆಳಗಿನ ಜಾವ ೬ ಗಂಟೆಯ ಹೊತ್ತಿಗೆ ಮಂಗಳಹಾಡಿ ನಾಟಕವನ್ನು ಮುಕ್ತಾಯಗೊಳಿಸುವನು. ನಂತರ ತನ್ನ ಕಲಾಸೇವೆಗಾಗಿ ಆಟಗಾರರು ಕೊಟ್ಟ ಹಣ ಉಡುಗೊರೆಗಳನ್ನು ಸ್ವೀಕರಿಸಿ, ಕಲಾಸೇವೆಯನ್ನು ಪೀಳಿಗೆಯಿಂದ, ಪೀಳಿಗೆಗೆ ಪ್ರಚಾರ ಮಾಡವಲ್ಲಿ ಬಯಲಾಟ ಮೇಳಗಾರನ ಪಾತ್ರ ಮಹತ್ತರವಾದದು. ಎಂದೆಂದಿಗೂ ಕಲಾವಿದರ ಮನಸ್ಸಿನಲ್ಲಿ ತಮ್ಮ ಕಲಾಗುರುಗಳೆಂದೇ ಗುರುತಿಸಿಕೊಳ್ಳುತ್ತಾನೆ.

**ವೇಷಭೂಷಣಗಳು :**

ಬಯಲಾಟದ ವೇಷಭೂಷಣಗಳು ಬಹಳ ವೈವಿಧ್ಯಮಯದಿಂದ ಕೂಡಿರುತ್ತವೆ. ಕಿರೀಟಗಳು, ಸೀರೆಗಳು, ನಡುಕಟ್ಟು, ಕೊರಳಹಾರ, ಕರ್ಣಕುಂಡಲ, ನಡುವಿನ ವಡ್ಯಾಣ, ಕಾಲ್ಗೆಜ್ಜೆ, ತ್ರಿಶೂಲ ಬಿಲ್ಲುಬಾಣಗಳು, ಗದೆ, ಹೂವಿನ ತುರಾಯಿ ಧನಸ್ಸು, ಬಣ್ಣಗಳು, ಚಕ್ರ, ಶಕ್ರ ಶಂಖ ಮೊದಲಾದವು.

ಮೇಳ, ವಾದ್ಯಗಳು, ತಾಳ, ಮದ್ದಳೆ, ಹಾರ್ಮೋನಿಯಂ, ಚೆಟಿಕೆತಾಳ, ಕೊಳಲು, ಶಂಖ, ಕಹಳೆ, ತುತ್ತೂರಿ.

**ಬಯಲಾಟದ ಕಥಾವಸ್ತು ಮತ್ತು ಪ್ರಮುಖನಾಟಕಗಳು :**

ಬಯಲಾಟಗಳ ಕಥಾವಸ್ತು ಧಾರ್ಮಿಕ, ನೈತಿಕ, ಧೈರ್ಯ, ಸಾಹಸ, ತ್ಯಾಗ, ಮತಪ್ರಚಾರ, ವ್ರತಾರ್ಚಣೆ, ಪವಾಡ, ಸಾಮಾಜಿಕ, ಜನಪದ ಮೊದಲಾದ ವಿಷಯವನ್ನೊಳಗೊಂಡಂತೆ ರಾಮಾಯಣ, ಮಹಾಭಾರತ, ಐತಿಹಾಸಿಕತೆ, ಸಾಂಸ್ಕೃತಿಕತೆ, ಸಾಮಾಜಿಕತೆಯ ಕುರಿತ ನಾಟಕಗಳನ್ನು ಆಡುವುದನ್ನು ಗುರುತಿಸುಬಹುದು. ಕರಿಭಂಟನಕಾಳಗ, ನುಂಕಮಲೆಸಿದ್ದೇಶ್ವರಮಹಿಮೆ, ದಕ್ಷಯಾಗ, ಗಿರಿಜಾಕಲ್ಯಾಣ, ಬಾಣಾಸುರ, ದಾನಶೂರಕರ್ಣ, ಕಂಸನವಧೆ, ರತಿಕಲ್ಯಾಣ, ಶಿವಜಲಂಧರ, ಜಗಜ್ಯೋತಿ ಬಸವೇಶ್ವರ, ಹೇಮರೆಡ್ಡಿಮಲ್ಲಮ್ಮ ರೇಣುಕಮಹಾತ್ಮೆ, ಸಂಪೂರ್ಣ ರಾಮಾಯಣ, ಲವ-ಕುಶರ ಕಾಳಗ, ಕುರುಕ್ಷೇತ್ರ ಮೊದಲಾದ ನಾಟಕಗಳನ್ನು ಈ ಪರಿಸರದಲ್ಲಿ ಆಡುವುದನ್ನು ಗುರುತಿಸಬಹುದು.

**ಬಯಲಾಟದ ಸಾಹಿತ್ಯಿಕ ಮೌಲ್ಯ :**

ಬಯಲಾಟವು ಸಾಹಿತ್ಯ ಸಂಗೀತ, ನೃತ್ಯ, ರಾಗ ಲಯಗಳ ಸಂಯೋಜನೆಯಾಗಿದ್ದು ಇದರಲ್ಲಿ ಸಾಹಿತ್ಯದ ಎಲ್ಲಾ ಪ್ರಕಾರಗಳನ್ನು ಹೆಚ್ಚು ಕಡಿಮೆ ಬಳಕೆಯಾಗುವುದನ್ನು ಕಾಣಬಹುದು. ಬಯಲಾಟದಲ್ಲಿ

ಮುಖ್ಯವಾಗಿ ಚಂದ್ರಶೈಲಿಯಲ್ಲಿ ಕಥಾನಿರೂಪಣೆ, ಸಂಭಾಷಣೆ ನಡೆಯುವುದನ್ನು ಮೇಳಗಾರನ ಮತ್ತು ಪಾತ್ರಗಳೊಂದಿಗೆ ಗುರುತಿಸಬಹುದು. ಲಾವಣಿಗಳು, ವಚನಗಳು, ತತ್ವಪದಗಳು, ಒಡಪು, ಒಗಟ್ಟುಗಳು, ಗಾದೆಗಳು, ಕಾವ್ಯಗಳು ಅಯಾ ಪಾತ್ರಗಳ ನಿರ್ವಹಣೆಯ ಮೂಲಕ ಅಭಿವ್ಯಕ್ತಿಗೊಳ್ಳುವುದನ್ನು ನೋಡಬಹುದು. ಬಯಲಾಟವು ಒಂದು ಗಂಡುಕತೆಯಾಗಿದ್ದು ಕಾವ್ಯಮೀಮಾಂಸೆಯ ಅಲಂಕಾರ, ಉಪಾಸೆಗಳು, ಶೃಂಗಾರ, ವೀರ, ರೌದ್ರ, ಕರುಣ ರಸಗಳ ಬಳಕೆಯನ್ನು ಕಾಣಬಹುದು

ಬಯಲಾಟದ ಕೇಲವು ಹಾಡುಗಳನ್ನು ಆಯಾ ಪಾತ್ರಗಳ ಹಿನ್ನಲೆಯಲ್ಲಿ ಗುರುತಿಸಿದೆ.

"ದಿತ್ತಾ ತಾಕಿಟಿತಕ, ತಾಕಿಟಿತಕ
ತಾತಾ ಕಿಟತಕ, ತಾತಾ ಕಿಟಿತಕ
ಧಿತ್ತರಿ ಕಿಟಿತಕ ತಾ, ಧಿತ್ತರಿ ಕಿಟಿತಕ ತಾ" ॥[೧೩]

ಮೇಳಗಾರನು ಪಾತ್ರಧಾರಿ ಅಟ್ಟದ ಮೇಲೆ ಬಂದಾಗ ಅವನನ್ನು ನೇರವಾಗಿ ಪರಿಚಯಿಸದೆ, ತಾಳ, ಮದ್ದಳೆಯ ಸಂಯೋಜನೆಯೊಂದಿಗೆ ತನ್ನ ಹಾಡಿಗೆ ತಕ್ಕಂತೆ ಹೆಜ್ಜೆಹಾಕುತ್ತಾ ನೃತ್ಯವನ್ನು ಮಾಡುವುದನ್ನು ಇಲ್ಲಿ ಗುರುತಿಸಬಹುದು.

"ಅಹಾ ದೇವ ಹರಿಶ್ಚಂದ್ರ ಹೆಂಡತಿ, ಚಂದ್ರಮತಿ, ಪಾಂಡವರ ಹೆಂಡತಿ ದ್ರೌಪತಿ, ಧುರ್ಯೋಧನ ಸತಿ ಭಾನುಮತಿ, ಮನ್ಮಥನ ಸತಿ ರತಿ, ನನ್ನ ಹೆಸರು ಸಾರಥಿ ಎಂದು ಕರೆಯುತ್ತಾರೆ. ದೇವಾ ಹೇಳಬೇಕು ತಮ್ಮ ನಾಮಾಂಕಿತ"[೧೪]

ಅಟ್ಟದ ಮೇಲೆ ಬಂದ ಪಾತ್ರಗಳನ್ನು ಪರಿಚಯಿಸಲು ಸಾರಥಿ ಇರುವನು. ಇವನು ತನ್ನ ಹೆಸರನ್ನು ಪ್ರಾಸಬದ್ಧವಾಗಿ, ವಸ್ತುಗಳೊಂದಿಗೆ, ವ್ಯಕ್ತಿಗಳ ಹೆಸರುಗಳಿಗೊಂದಿಗೆ ಊರುಗಳ ಹೆಸರುಗಳಗೊಂದಿಗೆ, ಇಲ್ಲವೆ ಒಡಪುಗಳ ಮೂಲಕ ಅಟ್ಟದ ಮೇಲಿನ ಪಾತ್ರಕ್ಕೆ ತನ್ನ ಹೆಸರೇಳಿ, ನಂತರ ತಮ್ಮ ಹೆಸರು ಬಂದ ಉದ್ದೇಶವೆನೆಂಬುದನ್ನು ಈ ಸಭಾ ಮಂಟಪಕೆ ಗೊತ್ತಾಗಲಿಯೆಂದು ಪಾತ್ರಧಾರಿಯ ಹೆಸರನ್ನು, ಉದ್ದೇಶ, ಮಹತ್ವವನ್ನು ಪ್ರೇಕ್ಷಕರಿಗೆ ತಿಳಿಸುತ್ತಾನೆ.

"ಸೈರಿಸು ಪ್ರಲಾಸ ಸೋದರಿ
ವೀರಾಂಗನೆ ಪುತ್ರ ಶೋಕ
ಸಾಕು ನಿಲ್ಲಿಸು ಸೋದರಿ
ವೀರರ ಮರಣಕ್ಕೆ ಶೋಕ ಪಾಡುವರೆ
ವೀರ ಮಾತೆ ಬಿಡು ನೀ ಚಿಂತೆ
ಪುತ್ರ ಶೋಕ ಸಾಕು ನಿಲ್ಲಿಸು" ॥ಪ॥[೧೪]

ಅಭಿಮನ್ಯುವಿನ ಸಾವನ್ನು ಕಂಡ ತಾಯಿ ಸುಭದ್ರೆ, ಹೆಂಡತಿ ಉತ್ತರೆಯ ಗೋಳಾಟವನ್ನು ಕಂಡ ಶ್ರೀಕೃಷ್ಣನು ಸಾಂತ್ವನ ಪಡಿಸುವುದನ್ನು ಕಾಣಬಹುದು. ಪುತ್ರ ಶೋಕದಿಂದ ಬಳಲುತ್ತಿದ್ದ ಸುಭದ್ರೆಯನ್ನು, ವೀರರ, ಧೀರರ ಸಾವಿಗೆ ಅಳಬಾರದೆಂದು ಧೈರ್ಯ ತುಂಬುವನು. ಪುತ್ರವಾತ್ಸಲ್ಯ ಮಾತೃವಾತ್ಸಾಲ್ಯವನ್ನು ನೋಡುಬಹುದು.

"ದ್ವಂಸ ಮಾಡುವ ವಂಶ ಘಾತಕರ
ನಿಸಂಶಯದಲಿ ನಾ ದ್ವಂಸ ಮಾಡುವ ವಂಶಘಾತಕರ
ಬಾರಿ ಬಾರಿಗೆ ದಾರಿ ತಪ್ಪಿಸಿ ಘೋರ ತರಹದ ಸಮರದಲಿ
ಯಾರು ಉಳಿಯದೆ ಪೆರದಿ ಮಾಡುವ ದುರುಳ ಕೌರವರನು"॥ಪ॥
ಶಕುನಿಯ ಕುತಂತ್ರವನ್ನು ಕಾಣಬಹುದು. ಕೌರವರ ಆಸ್ಥಾನದಲ್ಲಿದ್ದು
ಧುರ್ಯೋಧನನಿಗೆ ಸಲಹೆ, ಮಾರ್ಗದರ್ಶನ ನೀಡುತ್ತಾ ಅವನ ವಂಶವನ್ನು
ನಾಶಗೊಳಿಸಬೇಕೆಂಬ ಉದ್ದೇಶ, ದ್ವೇಷ ತಂತ್ರಗಳನ್ನು ನೋಡಬಹುದು"
"ಕಡದಿಡವೆ ಛಲದಿ ಕಡುಗರನ ಛಲದಿ
ಕಡದಿಡುವೆ ಛಲದಿ ಕಡುಗರನ ಛಲದಿ
ಭಂಡರನ್ನು ಕಡಿ ದಂಡಿಸುತ್ತಾ ಪಡ ಪುಂಡರೆದೆಯಾ ಬಗಿದು ಹಿಡಿವೆನು
ರುಂಡಗಳ, ಮುಂಡಗಳ ದಂಡಿಸುವೆನು" ॥ಪ॥[೧೫]

ಬಯಲಾಟ ಮತ್ತು ಬಯಲಾಟದ ಮೇಳಗಾರರು ಮೌಖಿಕ ಪರಂಪರೆಯನ್ನು ಪರಂಪರಾಗತವಾಗಿ ಉಳಿಸಿ–ಬೆಳೆಸುವಲ್ಲಿ, ಸಂಸ್ಕೃತಿಯ ರಕ್ಷಕರಾಗಿ ಕಾರ್ಯನಿರ್ವಹಿಸುತ್ತಾರೆ.

**೪.೪. ಸೋಬಾನೆಯವರು :**

ಜನಪದರು ಗ್ರಾಮಜೀವಿಗಳಾಗಿದ್ದು ತಮ್ಮ ದಣಿವಿನ ಆಯಾಸವನ್ನು ಕಳೆಯಲು ಹೊಲ, ಮನೆ ಕೆಲಸಗಳಲ್ಲಿ ಹಾಡುವುದನ್ನು ರೂಢಿ ಮಾಡಿಕೊಂಡು, ವಿಶ್ರಾಂತಿಯ ಮುಖೇನ ದೈಹಿಕ, ಮಾನಸಿಕ, ನೆಮ್ಮದಿ ಪಡೆಯುತ್ತಿದ್ದರು. ತಾವು ಹೊಲದಲ್ಲಿ ನಾಟಿ, ಕಳೆ, ಕೊಯ್ಯಲು, ಮನೆಯಲ್ಲಿ ಬೀಸುವಾಗ, ಕುಟ್ಟುವಾಗ, ಶ್ರಮನಿವಾರಣೆಗಾಗಿ ಹಾಡುತ್ತಿದ್ದರು. ಮುಂದೆ ತಾವು ಕಲಿತ ಮೌಖಿಕ ಜ್ಞಾನ ಪರಂಪರೆಯನ್ನು ತಮ್ಮ ಸಮುದಾಯಗಳಲ್ಲಿ ನಡೆಯುವ ಧಾರ್ಮಿಕ ಆಚರಣೆಗಳು, ಸಾಮಾಜಿಕ ಆಚರಣೆಗಳು ಶುಭಸಂದರ್ಭದಲ್ಲಿ ಹಾಡಿ ಅವರಿಂದ ವಿಶೇಷ ಪುರಸ್ಕಾರಕ್ಕೆ ಒಳಗಾಗಿ, ಉಡುಗೊರೆಗಳನ್ನು ಸ್ವೀಕರಿಸುತ್ತಿದ್ದರು. ಇವರು ತಮ್ಮ ಮೂಲವೃತ್ತಿಯ ಜೊತೆಗೆ ಹಾಡುವುದನ್ನು ಉಪವೃತ್ತಿಯಾಗಿ ಮಾಡಿಕೊಂಡಿರುವುದರಿಂದ ಇವರನ್ನು ಇಲ್ಲಿ ಅರೆವೃತ್ತಿನಾಯಕರಲ್ಲಿ ಅಧ್ಯಯನಕ್ಕೆ ಒಳಪಡಿಸಿದೆ.

ಸೋಬಾನೆಪದಗಳು ನಮ್ಮ ಸಂಸ್ಕೃತಿಯ ಅವಿಭಾಜ್ಯ ಅಂಗವಾಗಿದ್ದು, ಶುಭಕಾರ್ಯಗಳಲ್ಲಿ ಈ ಹಾಡುಗಳನ್ನು ಹಾಡುವುದರಿಂದ ಸೋಬಾನೆಪದಗಳೆಂದು ಕರೆಯುವ ವಾಡಿಕೆಯಾಗಿದೆ. ಸೋಬಾನೆ ಎಂದರೆ ಶುಭ, ಮಂಗಳಕರ, ಒಳ್ಳೆಯದು ಎಂಬರ್ಥವನ್ನು ಸೂಚಿಸುತ್ತದೆ. ಸೋಬಾನೆ ಪದಗಳು ಹೆಚ್ಚಾಗಿ ಸ್ತ್ರೀಯರಿಗೆ ಮೀಸಲಾಗಿದ್ದು ಅವುಗಳನ್ನು ಅವರ ಹಾಡಿಕೊಂಡು ಬರುವ ಸಂಪ್ರದಾಯ ಬೆಳೆದು ಬಂದಿರುವುದು ಕಾಣಬಹುದು.

ನಾಯಕನಹಟ್ಟಿಯ ವ್ಯಾಪ್ತಿಯಲ್ಲಿ ಎಲ್ಲಾ ಹಳ್ಳಿಗಳಲ್ಲಿ ಸೋಬಾನೆಯವರು ಇರುವುದನ್ನು ಕಾಣಬಹುದು. ಇಲ್ಲಿ ಬಹುತೇಕ ಸಮುದಾಯಗಳಾದ ಗೊಲ್ಲ, ಮ್ಯಾಸನಾಯಕರು, ಲಂಬಾಣಿಗಳು, ಭೋವಿ, ಆದಿಕರ್ನಾಟಕ, ಉಪ್ಪಾರ, ಕಮ್ಮಾರ, ಕುರುಬ ಮೊದಲಾದ ಕೆಳವರ್ಗದ ಜನರು ತಮ್ಮ ಶುಭ ಸಂದರ್ಭಗಳಲ್ಲಿ ಸೋಬಾನೆ ಹಾಡುವುದು ಒಂದು ಸಂಪ್ರದಾಯವಾಗಿ ಬೆಳೆದು ಅವರ ಜೀವನದ ಅವಿಭಾಜ್ಯ ಅಂಗವಾಗಿದೆ. ಇವರ ಹಾಡುಗಾರಿಕೆಯನ್ನು ಶಿಷ್ಟ ಮೂಲದಿಂದ ಕಲಿತಿರುವುದಿಲ್ಲ. ಬದಲಾಗಿ ಪರಂಪರಾಗತವಾಗಿ ಬಂದಿರುವ ಮೌಖಿಕ ಜ್ಞಾನಪರಂಪರೆಯ ಹಿನ್ನಲೆಯಿಂದ ಹಾಡುವರು. ಹಾಡುಗಾರಿಕೆಯಲ್ಲಿ ತಮ್ಮ ಜೀವನಾಭುವ, ಲೋಕಾನುಭವ, ಧೈವನಂಬಿಕೆ, ಶ್ರದ್ಧೆ, ನಿಷ್ಠ, ಕಾಯಕ ಸ್ಪಷ್ಟತೆ, ಸಹಕಾರ, ಸಹಬಾಳ್ವೆ, ತ್ಯಾಗಶೀಲತೆ ಮೊದಲಾದ ನೈತಿಕ, ಸಾಮಾಜಿಕ, ಧಾರ್ಮಿಕ, ಅಂಶಗಳು ಹಾಡನ್ನು ತಮ್ಮದೆ ಆದ ಕಂಠಸ್ಥರೂಪದಲ್ಲಿ ಹಾಡುತ್ತಾರೆ.

**ಸೋಬಾನೆ ತಂಡದ ರಚನೆ ಮತ್ತು ಹಾಡುಗಾರಿಕೆ :**

ಇವರು ತಮ್ಮಲ್ಲಿ ಅನುಭವ, ಪರಿಣಿತಿ ಪಡೆದ ೪ ರಿಂದ ೬ ಜನರಿರುವ ಒಂದು ತಂಡವನ್ನು ರಚಿಸಿಕೊಂಡು ತಮಗೆ ವೀಳ್ಯೆ ಕೊಡುವ ಕುಟುಂಬದ ಸಮುದಾಯದ ಕಾರ್ಯದಲ್ಲಿ ಭಾಗವಹಿಸಿ ಅಲ್ಲಿ ನಡೆಯುವ ನಾಮಕರಣ, ಮದುವೆ, ಸೀಮಂತಕಾರ್ಯ ಋತುಮತಿ ಮತ್ತು ಧಾರ್ಮಿಕ ಕಾರ್ಯಗಳು, ಇವುಗಳಲ್ಲಿ ಯಾವುದನ್ನು ಆ ಸಂದರ್ಭದಲ್ಲಿ ಆಚರಿಸುವವರೋ, ಆ ಕಾರ್ಯದ ಹಿನ್ನಲೆಯನ್ನು ಕುರಿತು ಹಾಡು ಹೇಳುವರು. ಹಾಗೆಯೆ ತಮ್ಮ ಸಮುದಾಯದ ಕುಲದೇವರಗಳ ಉತ್ಸವಗಳಲ್ಲಿ ಸ್ವಇಚ್ಚೆಯಿಂದ ಭಾಗವಹಿಸಿ, ಆ ದೇವರ ಮಹಿಮೆಯನ್ನು ಹಾಡುವರು. ಇಲ್ಲಿ ಸಾಂಸ್ಕೃತಿಕ ನಾಯಕರುಗಳಾದ ತಿಪ್ಪೇಸ್ವಾಮಿ, ಜಗಲೂರಜ್ಜ, ಜುಂಜಪ್ಪ, ರೇವಣಸಿದ್ಧ, ಗಾದ್ರಿಪಾಲನಾಯಕ, ಗೌರಸಂದ್ರಮಾರಮ್ಮ ರೇಣುಕಾಎಲ್ಲಮ್ಮನನ್ನು ಕುರಿತು ಇಲ್ಲಿನ ಹೆಂಗಳೆಯರು ಸುದೀರ್ಘವಾಗಿ ಎರಡು, ಮೂರು ರಾತ್ರಿಗಳವರೆಗೂ ಹಾಡುವ ಕಾವ್ಯ ಸಂಪತ್ತನ್ನು ಹೊಂದಿರುವವರು ಅವರು ತಮ್ಮ ಸೋಬಾನೆಯ ಸಂದರ್ಭದಲ್ಲಿ ಸಮಭಾಗದಲ್ಲಿ ಮುಖ್ಯಗಾಯಕರು ಮತ್ತು ಸೊಲ್ಲನ್ನು ಕೊಡುವ ಸಹಗಾಯಕರ ಮೂಲಕ ಸೋಬಾನೆ ಪದಗಳು ಪ್ರಾರ್ಥನೆಯೊಂದಿಗೆ ಪ್ರಾರಂಭಿಸಿ ಮುಂಗಳಾರತಿಯೊಂದಿಗೆ ಮುಕ್ತಾಯ ಮಾಡುವುದನ್ನು ನೋಡಬಹುದು.

ವಿಶೇಷವಾಗಿ ಮದುವೆ, ನಾಮಕರಣ, ಋತುಮತಿ, ಸೀಮಂತಕಾರ್ಯ ಮತ್ತು ಹಬ್ಬ ಹರಿದಿನಗಳಲ್ಲಿ, ಹೊಲಮನೆಕಾರ್ಯಗಳ ಸಂದರ್ಭದಲ್ಲಿ ಇವರನ್ನು ಅಹ್ವಾನಿಸಿ ಹಾಡಿಸಿ, ಅದಕ್ಕೆ ಪ್ರತಿಫಲವಾಗಿ, ಜನಪದರು ಅತಿಥಿಸತ್ಕಾರ, ಉಡುಗೊರೆಗಳನ್ನು ನೀಡಿ ಬೀಳ್ಕೊಡುವರು. ತಮ್ಮ ಮೂಲ ವೃತ್ತಿಯ ಜೊತೆಗೆ ಉಪವೃತ್ತಿಯನ್ನಾಗಿಸಿಕೊಂಡಿರುವ ಸೋಬಾನೆಯವರು ಆಯಾ ಪ್ರದೇಶದ ಸಾಮಾಜಿಕ, ಧಾರ್ಮಿಕ, ಸಾಂಸ್ಕೃತಿಕ ಅಂಶಗಳ ಪ್ರಚಾರ ಮಾಡುತ್ತಾ ನಮ್ಮ ಸಂಸ್ಕೃತಿಯ ರಕ್ಷಕರೆಂದು ಹೇಳಬಹುದು.

**ಸೋಬಾನೆ ಪದಗಳ ಸಾಹಿತ್ಯಿಕ ಮೌಲ್ಯ :**

ಮೌಖಿಕ ಪರಂಪರೆಯಲ್ಲಿ ಗುರುತಿಸಿಕೊಂಡಿರುವ ಸೋಬಾನೆ ಪದಗಳು ಜನಪದರ ಆಸ್ತಿ. ಐತಿಹಾಸಿಕ, ರಾಮಾಯಣ, ಮಹಾಭಾರತ, ಸ್ಥಳೀಯ ಸಾಂಸ್ಕೃತಿಕ ವೀರರು, ದೇವತೆಗಳು ಕುರಿತು ರಾಗಪ್ರಧಾನವಾಗಿ ಭಾವನಾತ್ಮಕವಾಗಿ ಹಾಡುವುದನ್ನು ಸೋಬಾನೆಗಳಲ್ಲಿ ಗುರುತಿಸಬಹುದು. ಸೋಬಾನೆ ಪದಗಳಲ್ಲಿ ಮೌಖಿಕ ಸಾಹಿತ್ಯದ ಕಾವ್ಯ, ಕಥೆ, ಒಗಟು, ಒಡಪು, ಗಾದೆಗಳು, ಜೀವನದ ವಾಸ್ತವ ಘಟನೆಗಳನ್ನು ಕುರಿತು ಕಾವ್ಯತ್ಮಕವಾಗಿ ತ್ರಿಪದಿ, ಷಟ್ಪದಿ, ರಗಳೆ, ಕಂದ ರೂಪದಲ್ಲಿ ಹಾಡುವುದನ್ನು ಗುರುತಿಸಬಹುದು. ಕೆಲವು ಆಯ್ದ ಸೋಬಾನೆ ಪದಗಳನ್ನು ಗುರುತಿಸಿದೆ.

"ಪೂಜಾರಿ ನೀ ಮೈಯಾ ತೊಳೆಯ ಸೋಬಾನೆ ॥ಪ॥
ಪೂಜಾರಿಯ ಮನೆಯಾಗ ನೀರು ಕಾಸಂರೆ
ಗುರುವೆ ನೀ ಬಂದು ಮೈಯ ತೊಳಿಯ ಸೋಬಾನವೆ ॥ಪ॥
ಪೂಜಾರಿ ನೀ ಬಂದು ಮೈಯ ತೋಳಿಯ ಎಂದಾರೆ
ಎದ್ದು ಬಂದು ಗುರು ಮಠಕೆ ಸೋಬಾನವೆ ॥ಪ॥

ಸ್ಥಳೀಯ ಕುಲದೇವರುಗಳ ಉತ್ಸವ ಪ್ರಾರಂಭವಾಗ ಮುನ್ನ ಸಂಬಂಧಿಸಿದ ಪೂಜಾರಿಯನ್ನು ಸಿದ್ದತೆ ಮಾಡುವ ಸಂದರ್ಭವನ್ನು ಕುರಿತು ಹಾಡುಕಟ್ಟಿ ಹೇಳುವ ಸೃಜನಶೀಲತೆ, ಕಲ್ಪನಾಶಕ್ತಿ, ದೈವಿಕಶ್ರೆದ್ಧೆ, ನಂಬಿಕೆಯನ್ನು ಗುರುತಿಸಬಹುದು.

"ಯಾಕೆ ತಿಪ್ಪೇಸ್ವಾಮಿ ಕೋಪನನ್ನ ಮ್ಯಾಲೆ
ಬೇಕು ಅಂದರೆ ಬೆಳ್ಳಿ ಶಿಖರವ ಮಾಡಿಸಿ ಕೊಡುವೆ
ಬಾಳೆ ಬಾಗಿದಾವು ॥ಪ॥
ಸಾಕು ಮಾಡಯ್ಯ । ಬಡತನ
ಬಾಳೆ ಬಾಗಿದಾವು ॥ಪ॥

ಕೆರೆಸುತ್ತ ಕ್ಯಾದಿಗೆ

ಮಠಸುತ್ತ ಮಲ್ಲಿಗೆ

ಅರಮನೆ ಸುತ್ತ ಅರಗಿಣಿ

ಬಾಲೆ ಬಾಗಿದಾವು"[೧೭]

ನಾಯಕನಹಟ್ಟಿಯ ಸುತ್ತಮುತ್ತಲಿನ ಹಳ್ಳಿಗರು ಆರಾಧ್ಯ ದೈವವಾಗಿ ಪವಾಡಪುರುಷ ತಿಪ್ಪೇಸ್ವಾಮಿಯನ್ನು ದಿನ ನೆನೆಸುತ್ತಾ, ತಮ್ಮ ಕಷ್ಟಗಳನ್ನು ದೂರ ಮಾಡಯ್ಯ ಎಂದು ಹರಕೆಗಳನ್ನು ಹೊತ್ತುಕೊಂಡು ಶ್ರೀಗಳಿಗೆ ಅರ್ಪಿಸಿ, ತಮ್ಮ ಬದುಕನ್ನು ಹಸನಾಗಿಸಿಯೆಂದು ಹೇಳುತ್ತಾ ಸ್ವಾಮಿಯ ಕೆರೆ, ಮಠ, ಮೊದಲಾದ ಸ್ಥಳಗಳನ್ನು ದೈವಿಭಕ್ತಿಯ ಹಿನ್ನೆಲೆಯಿಂದ ಹಾಡುವುದರ ಮೂಲಕ ಸ್ವಾಮಿಯ ಸೇವೆಗೆ ಕಾರ್ಯರ್ಥರಾಗುತ್ತಾರೆ.

"ಆರತಿ ಎತ್ತಿರೆ ವರಜ ಮುಖಿ ಸೀತಾದೇವಿಗೆ

ಹದಿನಾಲ್ಕು ಲೋಕವನ್ನಾಳವಂತಹ ರಾಮಚಂದ್ರಗೆ.

ಭೂಮಿನಾಳ್ವ ರಾಜ್ಯದೊರೆ ರಾಮಚಂದ್ರಗೆ

ಭೂಮಿ ದೇವಿಯ ಮಗಳು ಸೀತಾ ದೇವಿಗೆ."॥ಪ॥

ಮದುವೆ, ಸೀಮಂತ ಋತುಮತಿಯ ಸಂದರ್ಭಗಳಲ್ಲಿ ಹೆಣ್ಣು ಮಕ್ಕಳಿಗೆ ಮಂಗಳಾರತಿ ಎತ್ತಿ ಅವರಿಗೆ ಹಾರೈಸಿ, ಶುಭ ಸಂದೇಶ, ಜೀವನ ಸುಖಮಯವಾಗಿರೆಲೆಂದು ಹೇಳುವ ಮೂಲಕ ಸೀತೆ, ರಾಮನ ಚರಿತ್ರೆಯ ಹಿನ್ನೆಲೆಯನ್ನು ಹಾಡುತ್ತಾ, ಅದಕ್ಕೆ ಧಾರ್ಮಿಕ ಶ್ರದ್ಧೆಯನ್ನು ಕಲ್ಪಿಸಿರುವುದನ್ನು ನೋಡಬಹುದು.

## ಕೊನೆ ಟಿಪ್ಪಣಿಗಳು

೧. ಕಾಳೇಗೌಡ ನಾಗವಾರ, ಅಂಬಳಿಕೆ ಹಿರಿಯಣ್ಣ (ಸಂ) ಜೀ.ಶಂ.ಪ.ರವರ ಜಾನಪದ ಬರಹಗಳು, ಪುಟ–೧೦೮

೨. ಹಾಡಿದವರು. ಪೂಜಾರಿ ಓಬಯ್ಯ ಕೋಲು ಮೇಳದ ಕಲಾವಿದರು. ರಾಮದುರ್ಗ

೩. ಹಾಡಿದವರು. ನಿಂಗಾನಹಳ್ಳಿ ಬೋಸಯ್ಯ ಕೋಲು ಕಲಾವಿದರು ಬೋಸೆದೇವರಹಟ್ಟಿ.

೪. ಹಾಡಿದವರು, ಪೂಜಾರಿ ವೀರಣ್ಣ ಕೋಲು ಕಲಾವಿದರು ನೆಲಗೇತನಹಟ್ಟಿ.

೫. ಹಾಡಿದವರು ಎತ್ತಿನ ಓಬಯ್ಯ ಕೋಲು ಕಲಾವಿದರು

೬. ವಿರೇಶ ಬಡಿಗೇರ ಉತ್ತರ ಕರ್ನಾಟಕದ ಜಾನಪದ ಗೀತ ಮೇಳಗಳು ಒಂದು ಸಾಂಸ್ಕೃತಿಕ ಅಧ್ಯಯನ. ಪುಟ ೨೪೮

೭. ಹಾಡಿದವರು, ಜುಗಲಯ್ಯ ಭಜನೆ ಕಲಾವಿದರು ಬೋಸೆದೇವರಹಟ್ಟಿ.

೮. ಹಾಡಿದವರು. ರೆಡ್ಡಿಹಳ್ಳಿ ಭಜನೆಕಲಾವಿದರು ಸಣ್ಣ ಬೋರಯ್ಯ ಭಜನೆ ಕಲಾವಿದರು ನೆಲಗೇತನಹಟ್ಟಿ

೯. ಹಾಡಿದವರು. ಮಲ್ಲೇಶ ಎ.ಕೆ. ಭಜನೆ ಕಲಾವಿದರು ರಾಮದುರ್ಗ

೧೦. ಹಾಡಿದವರು. ಮಲ್ಲೇಶ ಎ.ಕೆ. ಭಜನೆ ಕಲಾವಿದರು ರಾಮದುರ್ಗ

೧೧. ಹಾಡಿದವರು. ಮಲ್ಲಯ್ಯ ಬೂದ್ಲು ಭಜನೆ ಕಲಾವಿದರು ರಾಮದುರ್ಗ

೧೨. ಹಾಡಿದವರು. ಪೆನ್ನಪ್ಪ. ಎ.ಕೆ. ಭಜನೆ ಕಲಾವಿದರು ರಾಮದುರ್ಗ

೧೩ ದುರ್ಗಾದಾಸ್. ಕೆ.ಆರ್. ಬಳ್ಳಾರಿ ಜಿಲ್ಲೆಯ ಬಯಲಾಟಗಳು. ಪುಟ–೧೮೯

೧೪. ದುರ್ಗಾದಾಸ್. ಕೆ.ಆರ್. ಬಳ್ಳಾರಿ ಜಿಲ್ಲೆಯ ಬಯಲಾಟಗಳು. ಪುಟ–೨೦೨

೧೫. ಹಾಡಿದವರು. ಗೋವಿಂದಪ್ಪಾ ಬಯಲಾಟ ಕಲಾವಿದರು ಜೋಗಿಹಟ್ಟಿ.

೧೬. ಹಾಡಿದವರು ಗಾದ್ರಿಬೋರಮ್ಮ ಸೋಬಾನೆ ಕಲಾವಿದರು ರಾಮದುರ್ಗ

೧೭. ಹಾಡಿದವರು ಸಣ್ಣ ಬೋರಮ್ಮ ಸೋಬಾನೆ ಕಲಾವಿದರು ರಾಮದುರ್ಗ

# ಅಧ್ಯಾಯ – ಐದು

# ವೃತ್ತಿ–ಅರೆವೃತ್ತಿಗಾಯಕರ ಪ್ರಸ್ತುತ ಸ್ಥಿತಿ–ಗತಿಗಳು ಮತ್ತು ಸಾಂಸ್ಕೃತಿಕ ಲಕ್ಷಣಗಳ ತಾತ್ವಿಕ ವಿಶ್ವೇಷಣೆ

೫. ೧. ವೃತ್ತಿಗಾಯಕರ ಪ್ರಸ್ತುತ ಸ್ಥಿತಿ–ಗತಿಗಳು
೫. ೨. ಅರೆವೃತ್ತಿಗಾಯಕರ ಪ್ರಸ್ತುತ ಸ್ಥಿತಿಗತಿಗಳು
೫. ೩. ಸಾಂಸ್ಕೃತಿಕ ಲಕ್ಷಣಗಳ ತಾತ್ವಿಕ ವಿಶ್ಲೇಷಣೆ
೫. ೪. ಸಲಹೆ ಮತ್ತು ಪರ್ಯಾಯಗಳು

## ಅಧ್ಯಾಯ – ೫

# ವೃತ್ತಿ–ಅರೆವೃತ್ತಿಗಾಯಕರ ಪ್ರಸ್ತುತ ಸ್ಥಿತಿ–ಗತಿಗಳು ಮತ್ತು ಸಾಂಸ್ಕೃತಿಕ ಲಕ್ಷಣಗಳ ತಾತ್ವಿಕ ವಿಶ್ಲೇಷಣೆ

### ೫.೧. ವೃತ್ತಿಗಾಯಕರ ಪ್ರಸ್ತುತ ಸ್ಥಿತಿಗತಿಗಳು :

ಒಂದು ಕಾಲದಲ್ಲಿ ಸಮಾಜದ ಸಾಂಸ್ಕೃತಿಕ ಪ್ರಚಾರ ಮಾಧ್ಯಮಗಳಾಗಿ ಸಮಾಜದ ಓರೆಕೋರೆಗಳನ್ನು ತಿದ್ದುತ್ತಾ, ಧಾರ್ಮಿಕ ಶ್ರದ್ಧೆ ಮಾಡಿಸುತ್ತಾ, ಬಯಲು ಮನರಂಜನಾ ಕೇಂದ್ರವಾಗಿ ಉತ್ತಮವಾದ ಸ್ಥಾನಮಾನ, ಘನತೆ, ಗೌರವ, ಧಾರ್ಮಿಕ ಶ್ರದ್ಧೆ, ಸಾಮಾಜಿಕ ಸ್ವೀಕರಾರ್ಹ, ಪೂಜ್ಯನೀಯ ವ್ಯಕ್ತಿಗಳಾಗಿ ಕುಲವೃತ್ತಿ ತಮ್ಮ ಕರ್ತವ್ಯವೆಂದು ಭಾವಿಸಿ ಸಮಾಜದ ಒಳಿತಿಗಾಗಿ ಕಾರ್ಯನಿರ್ವಹಿಸುತ್ತಿದ್ದರು.

"ಊರ ಹೊರವಲಯದಲ್ಲಿ ಜೋಪಡಿಗಳನ್ನು ಹಾಕಿಕೊಂಡು ಮಳೆ, ಗಾಳಿ, ಬಿಸಿಲು ಎನ್ನದೆ ಅಲ್ಪತೃಪ್ತರಾಗಿ, ದೈವತ್ವಕ್ಕೆ ಶರಣಾಗಿ, ನಿತ್ಯ ಎರಡು ಹೊತ್ತಿನ ಊಟಕ್ಕಾಗಿ ಕಷ್ಟದ ಜೀವನ ಸಾಗಿಸುವ ಇವರ ಸಮುದಾಯಗಳು ವೈವಿಧ್ಯಮಯವಾದ ಸಂಸ್ಕೃತಿಯನ್ನು ಹೊಂದಿವೆ."[೧] ಈ ಅಭಿಪ್ರಾಯ ವೃತ್ತಿಗಾಯಕರ ದೈನಂದಿನ ಬದುಕಿನ ಬವಣೆಯನ್ನು ಹಾಗೂ ಅವರ ಸಾಂಸ್ಕೃತಿಕ ಹಿರಿಮೆಯನ್ನು ಗುರುತಿಸುತ್ತಾ ಪ್ರಸ್ತುತ ಜೀವನದ ಮೇಲೆ ಬೆಳಕು ಚೆಲ್ಲುತ್ತದೆ.

ಆಧುನಿಕ ಸಮೂಹ ಮಾಧ್ಯಮಗಳಾದ ರೇಡಿಯೋ, ಟಿ.ವಿ., ದಿನಪತ್ರಿಕೆಗಳು, ಸಿನಿಮಾ, ವೃತ್ತಿರಂಗಭೂಮಿ, ಗಣಕಯಂತ್ರ, ಉಪಗ್ರಹಧಾರಿತ ಕಾರ್ಯಕ್ರಮಗಳು ಹಾಗೂ ಆಧುನೀಕರಣ, ಕೈಗಾರೀಕರಣ, ನಗರೀಕರಣ, ಜಾಗತೀಕರಣ, ಉದಾರೀಕರಣ ಮೊದಲಾದ ಆಧುನಿಕತೆಯ ಕೂಸುಗಳ ಪ್ರಭಾವದಿಂದ ಜನರು ಪರಂಪಾರಿಕ ಅಥವಾ ಮೌಖಿಕ ಸಾಹಿತ್ಯ, ಸಂಸ್ಕೃತಿಯ ಜಗತ್ತಿನಿಂದ

ಹೊರಬಂದು, ವೃತ್ತಿಗಾಯಕರಿಗೆ ದಾನ ಮಾಡುವುದು ಕಡಿಮೆಗೊಳಿಸಿ, ಅವರನ್ನು ಸಮಾಜದಿಂದ ನಿರ್ಲಕ್ಷ್ಯಕ್ಕೆ ಒಳಗಾಗಿಸಿದ್ದಾರೆ. ವ್ಯಾಪಾರೀಕರಣ ಮನೋಭಾವ, ಜನಸಂಖ್ಯೆ ಬೆಳವಣಿಗೆ, ಭೂಮಿಯ ಅಭಾವದಿಂದ ಕಣ್ಮರೆಯಾಗುತ್ತಾ ಪೂರಕ ಉದ್ಯೋಗಗಳನ್ನು ಅವಲಂಬಿಸಿ ತಮ್ಮ ಜೀವನ ನಿರ್ವಹಣೆ ಮಾಡುವುದನ್ನು ಈ ಕೆಳಕಂಡ ಅಂಶಗಳಿಂದ ಗುರುತಿಸಿದೆ.

**ಸಾಮಾಜಿಕ ಜೀವನ :**

ವೃತ್ತಿಗಾಯಕರು ಆಧುನಿಕ ಸಮಾಜದಿಂದ ಪ್ರತ್ಯೇಕವಾಗಿ ವಾಸಿಸುತ್ತಾ, ಸಾಮಾಜಿಕ ಸ್ತರವಿನ್ಯಾಸದಲ್ಲಿ ಅತ್ಯಂತ ಕೆಳವರ್ಗದಲ್ಲಿ ಬರುವಂತರಾಗಿದ್ದು ಮೇಲ್ವರ್ಗದವರಿಂದ ನಿರ್ಲಕ್ಷಕ್ಕೆ, ಅನಾಧರಣೆ, ಉದಾಸಿನತೆಗೆ ಒಳಗಾಗಿ, ಸಾಮಾಜಿಕ ತಾರತಮ್ಯಕ್ಕೆ ಒಳಗಾಗಿರುವ ಸಮುದಾಯಗಳಾಗಿವೆ. ಹಾಗೆಯೇ ಸ್ಥಿರ ಸಮುದಾಯಗಳೊಂದಿಗೆ ತಮ್ಮ ಬದುಕನ್ನು ನೆಲೆಗೊಳಿಸಲು ಸದಾ ಸಂಘರ್ಷಕ್ಕೆ ಒಳಗಾಗಿರುವ ಸಮುದಾಯಗಳೆಂದು ಹೇಳಬಹುದು.

ಒಂದು ಕಾಲದಲ್ಲಿ ಸಮಾಜದ ಬಯಲು ಸಾಂಸ್ಕೃತಿಕ ಕೇಂದ್ರಗಳಾಗಿ ಸಮಾಜದ ಉನ್ನತಿಗೆ, ಶ್ರಮಕ್ಕೆ ಶ್ರಮಿಸುತ್ತಿದ್ದ ಇವರ ವೃತ್ತಿ ಇಂದು ಭೀಕ್ಷಾಟನೆಯೆಂದು ಕಾನೂನಿಂದ ನಿಷೇದಕ್ಕೆ ಒಳಪಟ್ಟಿದೆ. ಜೊತೆಗೆ ಇವರು ಆಚರಿಸುವ ಮದುವೆ, ಋತುಮತಿ ಕಾರ್ಯ, ನಾಮಕರಣ, ಸೀಮಂತ ಕಾರ್ಯ ಮೊದಲಾದ ನಂಬಿಕೆಗಳು, ಆಚಾರ-ವಿಚಾರಗಳು, ಸಂಪ್ರದಾಯಗಳು ಆಧುನಿಕ ಸಮಾಜದ ದೃಷ್ಟಿಯಲ್ಲಿ ಮೌಢ್ಯಗಳು ಮತ್ತು ಮೂಡನಂಬಿಕೆಗಳೆಂದು ತಿರಸ್ಕರಿಸಲ್ಪಟ್ಟಿವೆ. ಇವರ ಆಹಾರ ಪದ್ಧತಿ, ಉಡುಗೆ-ತೊಡುಗೆಗಳು ಸಹ ಇಂದು ಆಧುನಿಕತೆಯ ಪ್ರಭಾವಕ್ಕೆ ಒಳಗಾಗಿ ತಾವು ಪರಿವರ್ತನೆಯ ಸುಳಿಗೆ ಸಿಲುಕಿ ತಮ್ಮ ಮೂಲ ಸಮಾಜಿಕ ನಂಬಿಕೆಗಳ ಪದ್ಧತಿಗಳಲ್ಲಿ ಬದಲಾವಣೆಯನ್ನು ಕಾಣಬಹುದು. ಒಟ್ಟಿನಲ್ಲಿ ಇವರು ಆಧುನಿಕತೆಯ ಪರಿವರ್ತನೆಗೆ ಒಳಗಾಗಿರುವುದನ್ನು ಗುರುತಿಸಬಹುದು.

**ಧಾರ್ಮಿಕತೆ :**

ವೃತ್ತಿಗಾಯಕರು ವೃತ್ತಿಗೆ ಬಲವಾದ ನಂಬಿಕೆ ದೈವತ್ವವಾಗಿದೆ. ನಾಯಕನಹಟ್ಟಿ ವ್ಯಾಪ್ತಿಯಲ್ಲಿ ಬರುವ ಕಿನ್ನರ ಜೋಗಿಗಳು, ದೊಂಬಿದಾಸರು, ಚೌಡಿಕೆಯವರು, ಸುಡಗಾಡುಸಿದ್ಧರು, ಮೊದಲಾದ ವೃತ್ತಿಗಾಯಕ ಸಮುದಾಯಗಳು ತಮ್ಮದೆಯಾದ ಧಾರ್ಮಿಕ ಕ್ಷೇತ್ರಗಳ ಒಕ್ಕಲಿನವರಾಗಿದ್ದು ಸಂಬಧಿಸಿದ ಕ್ಷೇತ್ರದ ದೈವದ ಆರಾಧಕರಾಗಿರುತ್ತಾರೆ.

ಕಿನ್ನರ ಜೋಗಿಗಳು ಮೊಳಕಾಲ್ಮೂರು ಭೈರವನ ಆರಾಧಕರಾಗಿರುವುದನ್ನು ಗುರುತಿಸಬಹುದು. ಇವರು ಹೆಚ್ಚು ಮಾತೃದೇವತಾ ಆರಾಧನೆಯ ಆರಾಧಕರಾಗಿದ್ದು, ಸ್ಥಳೀಯ ದೇವತೆಗಳಾದ ಎಲ್ಲಮ್ಮ, ಗೌರ ಸಮುದ್ರ ಮಾರಮ್ಮ, ಕಾವಲು ಚೌಡಮ್ಮ, ದಡ್ಲು ಮಾರಮ್ಮ, ದುರ್ಗಮ್ಮ, ಕೊಲ್ಲಾರಮ್ಮ ಮೊದಲಾದ ಮಾತೃದೇವತೆಗಳನ್ನು ಆರಾಧಿಸುತ್ತಾರೆ.

ತಮ್ಮ ಧಾರ್ಮಿಕ ಕ್ಷೇತ್ರಗಳಲ್ಲಿ ನಡೆಯುವ ಜಾತ್ರೆ, ಉತ್ಸವಾದಿಗಳಲ್ಲಿ ಭಾಗವಹಿಸಿ ಹಾಗೂ ತಮ್ಮ ನೆಲೆಯ ವ್ಯಾಪ್ತಿಯಲ್ಲಿ ಆಚರಿಸುವ ಹಬ್ಬ-ಹರಿದಿನಗಳನ್ನು ಆಚರಣೆ ಮಾಡುತ್ತಾ ಹರಕೆ, ಮುಡುಪು, ಪ್ರಾಣಿಬಲಿ ಕೊಡುವುದನ್ನು ಗುರುತಿಸಬಹುದು. ಇವರ ವೃತ್ತಿ ಹಿನ್ನೆಲೆ, ಕಥನ ಹಿನ್ನೆಲೆಯಲ್ಲಿ ದೈವದ ಕುರಿತು ಅತಿಯಾದ ಭಯ, ಭಕ್ತಿ, ಶ್ರದ್ಧೆ, ನಿಷ್ಠೆ, ತ್ಯಾಗ, ವ್ರತ ಅನುಸರಣೆಯನ್ನು ಇಂದಿಗೂ ಕಾಣಬಹುದು.

**ಆರ್ಥಿಕ ಸ್ಥಿತಿ :**

ವೃತ್ತಿಗಾಯಕರ ಮೂಲವೃತ್ತಿ ಹಾಡುವುದರ ಮೂಲಕ ಭೀಕ್ಷಾಟನೆ ಮಾಡುವುದು. ಆದರೆ ಇಂದು ಜಾಗತೀಕರಣ, ಉದಾರೀಕರಣ, ಕಂಪ್ಯೂಟರೀಕರಣ, ಸಿನಿಮಾ, ವೃತ್ತಿರಂಗಭೂಮಿ, ಪತ್ರಿಕೋದ್ಯಮ, ಕೈಗಾರೀಕರಣ, ನಗರೀಕರಣಗಳು ಅವರ ಮೂಲ ವೃತ್ತಿಗೆ ದಕ್ಕೆತಂದಿವೆ. ತಮ್ಮ ಉಪಕಸುಬಾದ ಬೇಟೆಯನ್ನು. ಭೀಕ್ಷಾಟನೆಯನ್ನು ಕಾನೂನಾತ್ಮಕವಾಗಿ ನಿಷೇಧಿಸಿರುವುದರಿಂದ ಅವರು ನಗರಗಳಿಗೆ ವಲಸೆ ಹೋಗಿ ಅನ್ಯ ವೃತ್ತಿಗಳನ್ನು ಕಂಡುಕೊಂಡಿರುವುದನ್ನು ಹಾಗೂ ಸ್ಥಳೀಯವಾಗಿ ಇರುವವರು ಸಣ್ಣಪುಟ್ಟ ವ್ಯಾಪಾರ, ಕಸಬುಗಳನ್ನು ಅವಲಂಬಿಸಿ ಜೀವನ ಮಾಡುವುದನ್ನು ಕಾಣಬಹುದು.

ಸ್ಥಳೀಯವಾಗಿ ವಾಸಿಸುವವರು ಸರ್ಕಾರದಿಂದ ಸಾಗುವಳಿ ಹಕ್ಕನ್ನು ಅದರಲ್ಲಿ ಕೆಲವು ಜನರಿಗೆ ದೊರೆತಿದ್ದು ಅವರು ಬೇಸಾಯದ ಮೂಲಕ ಜೀವನ ಮಾಡುವುದರ ಜೊತೆಗೆ ಪಶುಸಾಗಾಣಿಕೆ, ಕೋಳಿ, ಹಂದಿ ಸಾಗಾಣಿಕೆ, ಮೀನುಗಾರಿಕೆ, ಕೌದಿ ಹೊಲೆಯುವುದು, ಬಲೆ ನೆಯುವುದು, ಏರಪೀನ್, ಟೇಪು, ರಬ್ಬರ್ ವ್ಯಾಪಾರ, ಕರಕುಶಲಕಲೆ, ಪುನರ್ ಉಪಯುಕ್ತ ಪ್ಲಾಸ್ಟಿಕ್ ವಸ್ತುಗಳು ಮತ್ತು ಕೂದಲುಗಳ ಸಂಗ್ರಹಣೆ, ಹಳೆ ಛತ್ರಿ, ಟ್ರಂಕ್, ಬೀಗಗಳ ರೀಪೇರಿ ಮಾಡುತ್ತಾ ಜೀವನ ಸಾಗಿಸುವುದನ್ನು ಕಾಣಬಹುದು. ಕೆಲವರು ನಗರ ಪ್ರದೇಶಗಳಿಗೆ ವಲಸೆ ಹೋಗಿ ಅಲ್ಲಿ ಕಟ್ಟಡ ಹೋಟೆಲು ಕಾರ್ಮಿಕರಾಗಿ, ವಾಹನ ಚಾಲಕರಾಗಿ, ಬೀದಿಬದಿಯಲ್ಲಿ ಪಾನ್ ಅಂಗಡಿ, ಶೂಪಾಲಿಶ್ ಮಾಡುತ್ತಾ ಜೀವಿಸುವರು. ವಿದ್ಯಾವಂತ ಕೆಲವರು ಕೆಳ ಹಂತದ ಸರ್ಕಾರಿ ನೌಕರಿಗಳೂ ಹಾಗೂ ಖಾಸಗಿ ಸಂಸ್ಥೆಗಳಲ್ಲಿ ಕಾರ್ಯನಿರ್ವಹಿಸುವುದನ್ನು ಗುರುತಿಸುವುದು.

ಒಂದು ಕಡೆ ಸ್ಥಿರವಾಗಿ ನೆಲೆ ನಿಲ್ಲದೆ ಸರ್ಕಾರಿ ಸೌಲತ್ತುಗಳನ್ನು ಪಡೆಯಲು ಇವರಿಗೆ ಬೇಕಾದ ಸ್ಥಿರ ಪ್ರಮಾಣಿಕೃತ ದಾಖಲೆಗಳು ಇಲ್ಲದಿರುವುದರಿಂದ, ಅವುಗಳಿಂದ ವಂಚಿತರಾಗುತ್ತಾ ಆರ್ಥಿಕವಾಗಿ ಹಿಂದುಳಿದಿದ್ದು ತಮ್ಮ ದೈನಂದಿನ ಜೀವನ ನಿರ್ವಹಣೆ ಮಾಡಿಕೊಳ್ಳಲು ಪಡಬಾರದ, ಅನುಭವಿಸಬಾರದ ಯಾತನಮಯ, ದುರಂತಮಯ, ದುಸ್ತರ ಜೀವನ ನಡೆಸುವುದನ್ನು ಗುರುತಿಸಬಹುದು.

**ರಾಜಕೀಯ ಮತ್ತು ಶೈಕ್ಷಣಿಕ ಸ್ಥಿತಿ :**

ನಮ್ಮ ಸಮಾಜದ ಸಾಂಸ್ಕೃತಿಕ ರಾಯಭಾರಿಗಳಾಗಿದ್ದ ಇವರ ಅಭಿವೃದ್ಧಿಗಾಗಿ ನಮ್ಮ ಸಂವಿಧಾನದ ಕೆಲವು ಅನುಚ್ಛೇದಗಳಲ್ಲಿ ಶಿಕ್ಷಣ ಮತ್ತು ಸಮಾನತೆಗಾಗಿ, ಮತದಾನಕ್ಕಾಗಿ ಅವಕಾಶ ಕಲ್ಪಿಸಿಕೊಡುವುದರ ಮೂಲಕ ಅವರಿಗೂ ಪ್ರಜಾಪ್ರಭುತ್ವದಿಂದ ಹಿಡಿದು, ಶಾಸನಸಭೆಗಳವರೆಗೂ ಮೀಸಲಾತಿ ಕಲ್ಪಿಸಿಕೊಡಲಾಗಿದೆ. ದುರಾದೃಷ್ಟಾಶವತ್ ಅಲೆಮಾರಿ ಜನಾಂಗದವರಾದ ಇವರು ಕೆಲವು ಕಡೆ ಗುರುತಿನ ಚೀಟಿ, ರೇಷನ್‌ಕಾರ್ಡ್‌ಗಳನ್ನು ಸಹ ಪಡೆದುಕೊಂಡಿರುವುದಿಲ್ಲ. ಅಥವಾ ಸರ್ಕಾರವು ಇವರಿಗೆ ತಲುಪಿಸುವಲ್ಲಿ ಕೆಲವು ಮಾನದಂಡಗಳನ್ನು ವಿಧಿಸಿರುವುದರಿಂದ ಪಡೆಯಲು ಅರ್ಹತೆ ಹೊಂದಿರುವುದಿಲ್ಲ. ಮತದಾನದ ಹಕ್ಕನ್ನು ಪಡೆದಿರುವ ಕೆಲವರು ಜನಪ್ರತಿನಿಧಿಗಳ ಆಸೆ, ಆಮಿಷಗಳಿಗೆ ಒಳಗಾಗಿ ಹಣ, ಹೆಂಡ, ಸಾರಾಯಿಗಳಿಗೆ ತಮ್ಮ ಮತಗಳನ್ನು ಮಾರಿಕೊಂಡ ರಾಜಕೀಯ ಅಪ್ರಬುದ್ಧತೆಯನ್ನು ಗುರುತಿಸಬಹುದು. ಮೀಸಲಾತಿಯ ಕಡ್ಡಾಯ ಪಾಲನೆಯಿಂದ ಇವರಿಗೆ ಕೆಳಹಂತದ ಪಂಚಾಯತ್ ವ್ಯವಸ್ಥೆಯಲ್ಲಿ ಸದಸ್ಯರಾಗಿ ಆಯ್ಕೆ ಮಾಡಿದರೂ, ರಾಜಕೀಯವಾಗಿ ಅಷ್ಟೇನು ಜ್ಞಾನ ಪರಿಣಿತಿ ಹೊಂದಿರುವುದಿಲ್ಲ. ಇವರು ಸದಾ ವಲಸೆ ಹೋಗುವುದರಿಂದ ತಮಗೂ, ರಾಜಕೀಯಕ್ಕೂ ಯಾವುದೇ ಸಂಬಂಧವಿಲ್ಲವೆಂಬಂತೆ ತಮ್ಮ ಜೀವನ ನಿರ್ವಹಣೆ ಮಾಡುವುದನ್ನು ಗುರುತಿಸಬಹುದು. ರಾಜಕೀಯದಲ್ಲಿ ಈ ಸಮುದಾಯಗಳ ಪಾಲ್ಗೊಳ್ಳುವಿಕೆ ಅತ್ಯಂತ ಕಡಿಮೆಯಾಗಿದೆ.

ಶಿಕ್ಷಣ ಮೂಲಭೂತ ಹಕ್ಕು ಕಡ್ಡಾಯವಾದರೂ ಸದುಪಯೋಗ ಪಡೆದುಕೊಳ್ಳುವಲ್ಲಿ ಇವರು ಹಿಂದುಳಿದಿದ್ದಾರೆ. ಇದಕ್ಕೆ ಮುಖ್ಯ ಕಾರಣ ಅವರ ಅಲೆಮಾರಿ ಜೀವನ. ಬೇರೆ ಬೇರೆ ಊರುಗಳಿಗೆ ವಲಸೆ ಹೋಗುತ್ತಾ ತಮ್ಮ ಜೀವನ ನಡೆಸುತ್ತಾ, ತಮ್ಮ ಮಕ್ಕಳ ಶಿಕ್ಷಣದ ಬಗ್ಗೆ ಆಸಕ್ತಿವಹಿಸದೆ ತಮ್ಮ ಜೊತೆಗೆ ಕರೆದುಕೊಂಡು ತಮ್ಮ ವೃತ್ತಿಗಳನ್ನು ಕಲಿಸುವುದರ ಮೂಲಕ ಅವರನ್ನು ಅಕ್ಷರ ವಂಚಿತರನ್ನಾಗಿ ಮಾಡುತ್ತಾರೆ. ಕೆಲವು ಕಡೆ ಸ್ಥಿರವಾಗಿ ನೆಲೆನಿಂತ ವೃತ್ತಿಗಾಯಕ ಸಮುದಾಯಗಳು ಇಂದು ತಮ್ಮ ಮಕ್ಕಳ ಶಿಕ್ಷಣಕ್ಕೆ ಒತ್ತುಕೊಡುವುದು ಕಂಡುಬಂದರೂ ಅವರೂ ಪ್ರಾಥಮಿಕ, ಮಾಧ್ಯಮಿಕ, ಅಲ್ಪಸ್ವಲ್ಪ ಕಾಲೇಜು ಶಿಕ್ಷಣದವರೆಗೂ ಶಿಕ್ಷಣ ಸೌಲತ್ತನ್ನು ಪಡೆದುಕೊಂಡಿರುವುದನ್ನು ಗುರುತಿಸಬಹುದು. ಉನ್ನತ ಶಿಕ್ಷಣ ಇವರಲ್ಲಿ ಪಡೆದವರು ಅಪರೂಪ ಎಂದು ಹೇಳಬಹುದು. ಇವರಲ್ಲಿ ಸರ್ಕಾರಿ ನೌಕರಿಗಳನ್ನು ಪಡೆದವರು ಬೆರಳೆಣಿಕೆಯಷ್ಟು ಜನ. ಇವರು ಶಿಕ್ಷಣಕ್ಕೆ ಹೆಚ್ಚು ಮನ್ನಣೆಯನ್ನು ನೀಡದಿರುವುದಿಲ್ಲ.

"ವೃತ್ತಿಗಾಯಕರ ಬದುಕು ಆಧುನಿಕ ಸಮಾಜದ ಜೀವನಕ್ಕಿಂತ ಸಂಪೂರ್ಣ ಭಿನ್ನವಾದದ್ದು. ತನ್ನೆಲ್ಲಾ ಅವಶ್ಯಕತೆಗಳನ್ನು ಪೂರ್ಣವಾಗಿಸಿಕೊಂಡು ಆಧುನಿಕ ಸಮಾಜ ನಿರ್ಮಾಣವಾಗಿದೆ. ಆದರೆ ಕನಿಷ್ಟ ಅವಶ್ಯಕತೆಗಳಲ್ಲಿ ತಮ್ಮ ಬದುಕನ್ನು ಚಲನಾಶೀಲವಾಗಿಡುವಲ್ಲಿ ಅಲೆಮಾರಿಗಳು ಹೆಣಗುತ್ತಾರೆ

ಮತ್ತು ಬದುಕುತ್ತಾರೆ. ನೆಲೆ ಇಲ್ಲದವರೆಂದರೆ ನೆರಳಿಲ್ಲದ ಬದುಕು, ಸೂರಿಲ್ಲದವರ ಜೀವನ, ನಿರಂತರ ವಾತಾವರಣಕ್ಕೆ ಮೈಒಡ್ಡಿ ಮಳೆ, ಚಳಿ, ಬಿಸಿಲನ್ನು ಅನುಭವಿಸುತ್ತಾ ಬದುಕುವ ಜನ"೨ ಈ ಹೇಳಿಕೆಯು ವೃತ್ತಿಗಾಯಕರ ಪ್ರಸ್ತುತ ಎದುರಿಸುತ್ತಿರುವ ಸಮಸ್ಯೆಗಳ ವಾಸ್ತವ ಚಿತ್ರಣದ ಮೇಲೆ ಬೆಳಕು ಚೆಲ್ಲುತ್ತದೆ. ಆದರೂ ಇವರು ಬರ ಮತ್ತು ಹಸಿವಿನ ವಿರುದ್ಧ ತಮ್ಮ ಬದುಕಿನ ಆಶಯವನ್ನು ನಿರೂಪಿಸುವ ಹುಡುಕಾಟದ ಛಲ ಮಾತ್ರ ಆಧುನಿಕ ಸಮಾಜದ ಸಮುದಾಯಗಳಿಗೆ ಸಹ ಮಾದರಿಯಾಗುವುದು.

**೫.೨. ಅರೆವೃತಿಗಾಯಕರ ಪ್ರಸ್ತುತ ಸ್ಥಿತಿಗತಿಗಳು :**

ತಮ್ಮ ಮೂಲ ವೃತ್ತಿ ಜೊತೆಗೆ ಹಾಡುವುದನ್ನು ಪ್ರಮುಖ ವೃತ್ತಿಯಾಗಿಸಿಕೊಂಡು, ಸಾರ್ವಜನಿಕ ಆಹ್ವಾನದ ಮೆರೆಗೆ ಜಾತ್ರೆ, ಉತ್ಸವ, ಹಬ್ಬ-ಹರಿದಿನ, ಹೊಲ-ಮನೆ ಕಾರ್ಯಗಳ ಮೊದಲಾದ ವಿಶೇಷ ಸಂದರ್ಭಗಳಲ್ಲಿ ಹೋಗಿ ಕಥಾಮೇಳ, ಪ್ರದರ್ಶನ ನೀಡುತ್ತಾ ತಮ್ಮ ಕಲಾಸೇವೆಯನ್ನು ಮಾಡುತ್ತಾ ಪರಂಪರಾಗತ ಮೌಖಿಕ ಪರಂಪರೆಯನ್ನು ಪ್ರಚಾರ ಮಾಡುತ್ತಾ ಉಪಜೀವಿಸುವ ಅರೆವೃತ್ತಿಗಾಯಕರು ಇಂದು ಆಧುನಿಕತೆಯ ಪರಿವರ್ತನೆಯ ಬಿರುಗಾಳಿಗೆ ಸಿಲುಕಿ ಸಾಂಸ್ಕೃತಿಕ ಜೀವನದಿಂದ ವಿಮುಖರಾಗಿದ್ದಾರೆ.

ಇವರು ಆರ್ಥಿಕವಾಗಿ, ರಾಜಕೀಯವಾಗಿ, ಸಾಮಾಜಿಕವಾಗಿ, ಶೈಕ್ಷಣಿಕವಾಗಿ ಉತ್ತಮವಾದ ಸೌಲತ್ತುಗಳನ್ನು ಪಡೆದುಕೊಂಡು ಅಭಿವೃದ್ಧಿ ಹೊಂದಿರುವುದನ್ನು ಗುರುತಿಸಬಹುದು. ಆದರೆ ಇವರ ಸಾಂಸ್ಕೃತಿಕ ಜೀವನದ ಮೇಲೆ ಯಾಂತ್ರಿಕರಣ, ಆಧುನೀಕರಣ, ನಗರೀಕರಣ, ಜಾಗತೀಕರಣ, ರೇಡಿಯೋ, ದೂರದರ್ಶನ, ವೃತ್ತಿರಂಗಭೂಮಿ, ಗಣಕಯಂತ್ರ ಮೊದಲಾದ ಆಧುನಿಕ ಸಮೂಹ ಮಾಧ್ಯಮಗಳ ಪ್ರಭಾವದಿಂದ ಯುವ ಪೀಳಿಗೆಯು ಇವುಗಳಿಂದ ಪ್ರಭಾವಿತರಾಗಿ ಪರಂಪರಾಗತ ಮೌಖಿಕ ಪರಂಪರೆಯನ್ನು ನಿರ್ಲಕ್ಷಿಸುತ್ತಾ ತಮ್ಮ ಜನಪದ ಕಲೆಗಳು, ಸಾಹಿತ್ಯವನ್ನು ಕಡೆಗಣಿಸುವುದರ ಮೂಲಕ ಅರೆವೃತ್ತಿಗಾಯಕರ ಕಲಾಸೇವೆಯನ್ನು ಕಡೆಗಣಿಸುವುದರ ಮೂಲಕ ಪ್ರೋತ್ಸಾಹ, ಸಹಕಾರವಿಲ್ಲದೆ ಸಮಾಜದ ಅನಾದರಣೆಗೆ ಒಳಗಾಗಿ ತಾವು ಬದಲಾಗುವ ಪರಿಸ್ಥಿತಿಗೆ ತಕ್ಕಂತೆ ಹೊಂದಾಣಿಕೆ ಮಾಡಿಕೊಂಡು ಜೀವನ ನಡೆಸುತ್ತಾರೆ.

ಒಟ್ಟಿನಲ್ಲಿ ಸಮಾಜದ ಸಂವಹನ ಸಂಪರ್ಕ ಸಾಧನೆಗಳಾಗಿ ಕಾರ್ಯನಿರ್ವಹಿಸುತ್ತಿದ್ದ ಇವರು ಆಧುನಿಕತೆಯ ಪ್ರಭಾವ, ಯುವ ಪೀಳಿಗೆಯ ನಿರ್ಲಕ್ಷ, ಕಡೆಗಣನೆಯ ಮೂಲಕ ತಮ್ಮಲ್ಲಿರುವ ಪರಂಪರಾಗತ ಜ್ಞಾನ ಪರಂಪರೆಯು ಇವರೊಂದಿಗೆ ನಶಿಸುವ ಅಳಿವಿನ ಅಂಚಿನಲ್ಲಿದೆ. ಆದ್ದರಿಂದ ಪರಂಪರಾಗತ ಜ್ಞಾನ ಪರಂಪರೆಯನ್ನು ಉಳಿಸಿ, ಬೆಳಸಿ, ಸಂರಕ್ಷಿಸುವ ಕಾರ್ಯ ನಮ್ಮೆಲ್ಲರ ಕರ್ತವ್ಯವೆಂದು ಹೇಳಬಹುದು.

### ೫.೩. ವೃತ್ತಿ–ಅರೆವೃತ್ತಿಗಾಯಕರ ಸಾಂಸ್ಕೃತಿಕ ಲಕ್ಷಣಗಳ ತಾತ್ವಿಕ ವಿಶ್ಲೇಷಣೆ :

ವೃತ್ತಿಗಾಯಕರು ಒಂದೇ ವಲಯ ಅಥವಾ ಸ್ಥಳದಲ್ಲಿ ನೆಲೆಯಾಗಿರದೆ ಜೀವನೋಪಾಯಕ್ಕಾಗಿ ಕುಟುಂಬ ಸಮೇತ ಒಂದು ಕಡೆಯಿಂದ ಇನ್ನೊಂದು ಕಡೆಗೆ ಅಲೆದಾಡುವುದರ ಮೂಲಕ ತಮ್ಮದೆಯಾದ ಭಾಷೆ, ಕಲೆ, ಸಾಹಿತ್ಯ, ಸಂಸ್ಕೃತಿ ಹೊಂದಿರುವ ಇವರು ನಮ್ಮ ಸಮಾಜದ ಸಾಂಸ್ಕೃತಿಕ ಸಂಪತ್ತನ್ನು ಹೆಚ್ಚಿಸಿದ್ದಾರೆ. ಒಂದೊಂದು ವೃತ್ತಿಗಾಯಕ ಒಂದೊಂದು ರೀತಿಯ ಸಾಮಾಜಿಕ, ಸಾಂಸ್ಕೃತಿಕ, ಧಾರ್ಮಿಕ ಮತ್ತು ಸಾಹಿತ್ಯಿಕ ಅಂಶಗಳನ್ನು ಪಾಲಿಸಿಕೊಂಡು ಬಂದಿರುವುದನ್ನು ಈ ಅಧ್ಯಯನದಲ್ಲಿ ಚರ್ಚಿಸಲಾಗಿದೆ.

ಇವರು ನಮ್ಮ ಸಮಾಜದ ಸಾಂಸ್ಕೃತಿಕ ಮಾಧ್ಯಮಗಳಾಗಿ, ಲೋಕಕಲ್ಯಾಣಕ್ಕಾಗಿ ಸಾಧ್ಯವಾದಷ್ಟು ಶ್ರಮಿಸಿದವರು. ಸಾಮಾಜಿಕ ವ್ಯವಸ್ಥೆಯಲ್ಲಿ ಸಂಪರ್ಕ ಸೇತುವೆಯಂತೆ ರಂಜಕರಾಗಿ, ಕಲಾವಿದರಾಗಿ, ಇತಿಹಾಸಕಾರರಾಗಿ, ಭವಿಷ್ಯ ತಜ್ಞರಾಗಿ, ವ್ಯಾಪಾರಿಗಳಾಗಿ, ಕುಶಲಕರ್ಮಿಗಳಾಗಿ ಶ್ರಮಿಸುವುದನ್ನು ಕಾಣಬಹುದು. ತಮ್ಮ ಉಪಜೀವನಕ್ಕಾಗಿ ಲೋಕವನ್ನು ಸುತ್ತುವುದರೊಂದಿಗೆ ಲೋಕದ ಜ್ಞಾನವನ್ನು ಅರಗಿಸಿಕೊಳ್ಳುವುದರ ಮೂಲಕ ತನಗೇನು ಕೊಟ್ಟಿದೆ ಎನ್ನುವುದು ಗಣನೆಗೆ ತೆಗೆದುಕೊಳ್ಳದೆ ಲೋಕದ ಶ್ರೇಯಸ್ಸಿಗಾಗಿ ತಮ್ಮ ಸಾರ್ಥಕ ಸೇವೆಯನ್ನು ಸಲ್ಲಿಸುವ ಸಮುದಾಯಗಳಾಗಿವೆ.

ಇವರ ಸಾಂಸ್ಕೃತಿಕ ಲಕ್ಷಣಗಳನ್ನು ದೈವ ಸಂಬಂಧ, ವೃತ್ತಿ ಸಂಬಂಧ, ಕಲೆ ಸಂಬಂಧಗಳ ಹಿನ್ನೆಲೆಯಲ್ಲಿ ವಿಶ್ಲೇಷಣೆಗೆ ಒಳಪಡಿಸಿ ಗುರುತಿಸಿದೆ.

ತಮ್ಮ ವೃತ್ತಿಯೊಂದಿಗೆ ನೆಲೆ ನಿಂತುದುದರ ಬಗ್ಗೆ ವಿಶಿಷ್ಟವಾಗಿರುವಂತಹ ನಂಬಿಕೆ, ಸಂಪ್ರದಾಯ, ಆಚರಣೆಗಳನ್ನು ಹೊಂದಿದ್ದಾರೆ. ಅನೇಕ ಐತಿಹ್ಯಗಳಲ್ಲದೆ ತಮ್ಮ ವೃತ್ತಿ ಮೂಲದ ಬಗ್ಗೆ ಚಾರಿತ್ರಿಕ ದಾಖಲೆಗಳನ್ನು ಸಹ ನೀಡುತ್ತಾರೆ. ಹೆಚ್ಚಿನದನ್ನೂ ಕಂಠಸ್ಥ ರೂಪದಲ್ಲಿ ಕಾಪಾಡಿಕೊಂಡು ಬಂದಿದ್ದಾರೆ. ತಮ್ಮ ವೃತ್ತಿ ಮೂಲದ ಬಗ್ಗೆ ಪೌರಾಣಿಕ, ಅಲ್ಪಸ್ವಲ್ಪ ಚಾರಿತ್ರಿಕ, ಜಾನಪದ ಕತೆಗಳ ಮೂಲಕ ತಿಳಿಸುವುದನ್ನು ಕಾಣಬಹುದು. ಧಾರ್ಮಿಕ ವೃತ್ತಿಗಾಯಕರಾದ ಚೌಡಿಕೆಯವರು ತಮ್ಮ ವೃತ್ತಿ ಹಿನ್ನೆಲೆಯ ಬಗ್ಗೆ ಪೌರಾಣಿಕ, ಐತಿಹಾಸಿಕ, ಜನಪದ ಹಿನ್ನೆಲೆಯಲ್ಲಿ ರೇಣುಕಾದೇವಿಯ ಜೀವನ ಘಟನೆಗಳನ್ನು ಹೇಳುತ್ತಾ ತಮ್ಮ ವೃತ್ತಿ ಮೂಲದ ಬಗ್ಗೆ ರೇಣುಕಾದೇವಿ ಅಥವಾ ಎಲ್ಲಮ್ಮನ ಮಹಿಮೆಯ ಹಿನ್ನೆಲೆಯಲ್ಲಿ ಹೇಳುವರು. ಕಿನ್ನರಿ ಜೋಗಿಗಳು ತಮ್ಮ ವೃತ್ತಿಯ ಮೂಲ ಪುರುಷ ಪಾಂಡವರ ಸುತ ಅರ್ಜುನನೆಂದು ತಾವು ಅರ್ಜುನ ಜೋಗಿಗಳೆಂದು, ಶಿವನ ಅನುಗ್ರಹದಿಂದ ಬಂದಿರುವವರೆಂದು ಭೈರವನ ಆರಾಧಕರೆಂದು ತಮ್ಮ ವೃತ್ತಿ ಮೂಲದ ಹಿನ್ನೆಲೆ ಬಗ್ಗೆ ತಿಳಿಸುವರು. ಸುಡಗಾಡುಸಿದ್ಧರು ತಾವು ಮಸಣದಲ್ಲಿ ಪಾರ್ವತಿ, ಶಿವನ ಅನುಗ್ರಹದಿಂದ ಹುಟ್ಟಿದ ನವಕೋಟಿ ಸಿದ್ಧರು, ಸತ್ಯಹರಿಶ್ಚಂದ್ರನ ವಂಶಜರೆಂದು ತಮ್ಮ ವೃತ್ತಿ ಹಿನ್ನೆಲೆಯನ್ನು ಹೇಳುವವರು. ದೊಂಬಿದಾಸರು,

ಮೊದಲಾದ ವೃತ್ತಿಗಾಯಕರು ತಮ್ಮ ಮೂಲದ ಕುರಿತಂತೆ ವಿಶಿಷ್ಟವಾಗಿರುವಂತ ವಿಚಾರ ಸಂಗತಿಗಳನ್ನು ಹೊತ್ತು ತಂದಿದ್ದಾರೆ. ಸಾಂಸ್ಕೃತಿಕ ಲೋಕದಲ್ಲಿ ತಮ್ಮನ್ನು ತಾವು ಗುರುತಿಸಕೊಳ್ಳುವಲ್ಲಿ ಪುರಾಣ, ಐತಿಹ್ಯ, ಚಾರಿತ್ರಿಕ ಜನಪದ ಅಂಶಗಳ ಆಧಾರದ ಮೇಲೆ ತಮ್ಮ ಕುಲ ಕಥನಗಳನ್ನು ಹೇಳುವುದನ್ನು ಗುರುತಿಸಬಹುದು.

ಇವರು ತಮ್ಮದೆಯಾದ ವಿಧಿಯಾಚರಣೆಗಳನ್ನು ತಮ್ಮ ಸಮುದಾಯಗಳಲ್ಲಿ ನಡೆಸಿಕೊಂಡು ಬಂದಿರುವುದನ್ನು ಕಾಣಬಹುದು. ಇವರು ತಮ್ಮ ಸಮುದಾಯದ ಕಷ್ಟ–ಸುಖಗಳು, ವೈವಾಹಿಕ ಸಂಬಂಧಗಳು, ವಲಸೆ, ಪ್ರಯಾಣದಲ್ಲಿ ನೆಲೆನಿಲ್ಲುವ ಸ್ಥಳಗಳು, ಹೊಸದಾಗಿ ಜನಿಸಿದ ಮಕ್ಕಳನ್ನು ಕುಲಕ್ಕೆ ಸೇರಿಕೊಳ್ಳುವ ಸಂಬಂಧ ವಾಚಕಗಳನ್ನು ಗುರುತಿಸಬಹುದು.

ತಮ್ಮದೆಯಾದ ದೈವಗಳನ್ನು ಆಚರಿಸುವುದರ ಮೂಲಕ ಆ ದೈವಗಳ ಆರಾಧಕರಾಗಿ ಸಂಬಂಧಸಿದ ಧಾರ್ಮಿಕ ಕ್ಷೇತ್ರಗಳ ಧಾರ್ಮಿಕೋತ್ಸವಗಳಲ್ಲಿ ಭಾಗವಹಿಸಿ ತಮ್ಮ ಹರಕೆ, ಮುಡುಪುಗಳನ್ನು ಸಲ್ಲಿಸುವುದರ ಮೂಲಕ ಇಷ್ಟಾರ್ಥ ದೈವದ ಕೃಪೆಗೆ ಪಾತ್ರರಾಗುವುರು. ಸಂಬಂಧಪಟ್ಟ ದೇವರುಗಳ ಗುರು ಮುಖೇನ ದೀಕ್ಷೆ ಪಡೆದು ಆಯಾ ದೈವದ ಧಾರ್ಮಿಕ ಕ್ಷೇತ್ರದ ಒಕ್ಕಲಿವರಾಗಿ, ಆ ದೈವದ ಮಹಿಮೆಯನ್ನು ಹಾಡುತ್ತಾ ಜೀವನ ನಡೆಸುವುದನ್ನು ಗುರುತಿಸಬಹುದು. ಇವರು ಕೆಲವು ದೇವರುಗಳು ಒಕ್ಕಲಿನವರಾಗಿ ಕಡ್ಡಾಯವಾಗಿ ಆ ದೇವರುಗಳ ಆರಾಧಕರು ಆಗಿರುತ್ತಾರೆ. ಎಲ್ಲಮ್ಮನ ಆರಾಧಕರು ಚೌಡಿಕೆಯವರು, ಭೈರವನ ಆರಾಧಕರಾಗಿ ಕಿನ್ನರ ಜೋಗಿಗಳು, ಶಿವನ ಆರಾಧಕರಾಗಿ ಸುಡುಗಾಡಸಿದ್ಧರು, ವಿಷ್ಣುವಿನ ಮತ್ತು ವಿಠಲನ ಆರಾಧಕಾರಾಗಿ ದೊಂಬಿದಾಸರು, ಈ ದೈವಗಳ ಹೆಸರಿನಲ್ಲಿ ತಮ್ಮ ವೃತ್ತಿ ಮಾಡುವುದು ಗುರುತಿಸಿದೆ.

ಇವರ ಅಸ್ತಿತ್ವಕ್ಕೆ ಅಥವಾ ನೆಲೆ ನಿಂತು ಬದುಕಿನ ಬಂಡಿಯನ್ನು ಸಾಗಿಸಲು ತಮ್ಮ ದೈವಗಳು ಕಾರಣವಾಗಿವೆಂಬ ಬಲವಾದ ನಂಬಿಕೆಯನ್ನು ಹೊಂದಿರುವರು. ತಮ್ಮ ಕಂಟಕಗಳಿಂದ ವಿಮುಕ್ತಿ, ರೋಗರುಜಿನಗಳಿಂದ ನಿವಾರಣೆ, ರಕ್ಷಣೆಗೆ ಇವರು ಮಾತೃದೇವತಾರಾಧನೆಯಯನ್ನು ಆಚರಿಸುವರು ಇಲ್ಲಿನ ಗೌರಸಮುದ್ರ ಮಾರಮ್ಮ, ದುರ್ಗಮ್ಮ, ಚೌಡಮ್ಮ, ಎಲ್ಲಮ್ಮ, ಹುಲಿಗಮ್ಮ, ಕೊಲ್ಲಾರಮ್ಮ ಮೊದಲಾದ ದೇವತೆಗಳ ಆರಾಧನೆಯ ಹಿನ್ನೆಲೆಯಲ್ಲಿ ಕಾಣಬಹುದು. ತಮ್ಮ ವೃತ್ತಿಯಲ್ಲಿ ಹಾಡುವಾಗ ಕಥಾಮೇಳ ನಡೆಸುವ ಸಂದರ್ಭದಲ್ಲಿ ತಮ್ಮ ಕಂಠಸ್ಥ ರೂಪದಲ್ಲಿ ದೀರ್ಘವಾಗಿ ಕಾವ್ಯಗಳ, ಕಥೆಗಳ, ಉಪಕಥೆಗಳ ನಿರೂಪಣೆ, ಸಂಭಾಷಣೆಯ ಮೂಲಕ ತಮ್ಮ ದೈವದ ಮಹಿಮೆಯನ್ನು ಹಾಡುವುದನ್ನು ಗುರುತಿಸಬಹುದು.

ಇಲ್ಲಿನ ಸಾಂಸ್ಕೃತಿಕ ನಾಯಕರಾದ ತಿಪ್ಪೇಸ್ವಾಮಿ, ಜಗಲೂರಜ್ಜ, ಜುಂಜಪ್ಪ, ಗಾದ್ರಿಪಾಲನಾಯಕ ಮೊದಲಾದವರನ್ನು ಕುರಿತು ದೀರ್ಘವಾದ ಮೌಖಿಕ ಸಾಹಿತ್ಯ ಪರಂಪರೆಯನ್ನು ಇವರ ವೃತ್ತಿಯಲ್ಲಿ ಕರಗತವಾಗಿರುವದನ್ನು ನೋಡಬಹುದು.

"ದೈವಗಳು ವೃತ್ತಿಗಾಯಕ ಸಮುದಾಯವಾದ ಆರ್ಥಿಕ ವ್ಯವಸ್ಥೆಯನ್ನು ನೋಡಿಕೊಳ್ಳುತ್ತದೆ. ಅಂದರೆ ದಿನನಿತ್ಯದ ಊಟೋಪಚಾರಕ್ಕೆ ಬೇಕಾಗುವ ಅಗತ್ಯ ಪರಿಕರಗಳನ್ನು ಈ ದೈವಗಳನ್ನು ಹೊತ್ತುಕೊಂಡು ಹೋಗುವುದರ ಮುಖಾಂತರ ಭೀಕ್ಷೆ ಬೇಡಿ ಪಡೆಯುತ್ತಾರೆ. ಇವರ ದೃಷ್ಟಿಯಲ್ಲಿ ದೇವರು ಸರ್ವಾಂತರ್ಯಾಮಿ ದೇವರನ್ನು ಬೇಕಾದಲ್ಲಿ ಆಹ್ವಾನಿಸಿಕೊಳ್ಳುತ್ತೇದೆಂಬ ನಂಬಿಕೆ ಇವರಿಗಿದೆ."[೨] ಇವರ ಜೀವನ ನಿರ್ವಹಣೆಗೆ ಮೂಲಾಧಾರ ದೇವರು ದೈವದ ನಂಬಿಕೆಯೆಂಬುದನ್ನು ಗುರುತಿಸುತ್ತಾ ಧಾರ್ಮಿಕ ಅವಿನಾಭಾವ ಸಂಬಂಧವನ್ನು ಕಾಣಬಹುದು. ಇವರಲ್ಲಿ ಕುಲದೈವಗಳು, ಆರಾಧ್ಯ ದೈವಗಳ ಸಮ್ಮಿಶ್ರಣದ ಭಕ್ತಿಯಿಂದ ಆಚರಿಸುವದನ್ನು ಕಾಣಬಹುದು. ಇವರು ತಮ್ಮ ಪೂರ್ವಿಕರನ್ನು ದೇವರುಗಳೆಂದು ಆಚರಿಸುವುದರ ಮೂಲಕ ಅವರಿಗೆ ದೈವತ್ವ ಕಲ್ಪಿಸಿಕೊಟ್ಟಿರುವುದು ನಮ್ಮ ಭಾರತೀಯ ಸಂಸ್ಕೃತಿಯ ಪ್ರತೀಕವಾಗಿದೆ.

ತಮ್ಮ ಗಾಯನ ಸಂದರ್ಭದಲ್ಲಿ ತಮ್ಮದೆಯಾದ ವಾದ್ಯಪರಿಕರಗಳ ಮೂಲಕ ಕಲೆಯನ್ನು ಪ್ರಚಾರ ಮಾಡುತ್ತಾ ಕಥಾಮೇಳ ನಡೆಸುತ್ತಾ, ಸಮಾಜ, ಜನತೆಯನ್ನು ಸಂತೋಷಗೊಳಿಸುವುದು ಒಂದು ಸೇವಾಭಾವನೆಯೆಂಬುದು ಇವರಲ್ಲಿದೆ. ಹಾಗೂ ಅದಕ್ಕೆ ದೈವತ್ವದ ಕಾರಣ ಎಂದು ನಂಬಿದ್ದಾರೆ.

ಕಿನ್ನರಿ ಜೋಗಿಗಳು ತಮ್ಮ ವಾದ್ಯವಾದ 'ಕಿನ್ನರಿ' ತಮಗೆ ಅರ್ಜುನನ ಮೂಲಕ ಬಂದಿರುವುದೆಂದು ಎಲ್ಲಮ್ಮನ ಆರಾಧಕರು 'ಚೌಡಿಕೆ' ಎಲ್ಲಮ್ಮನ ಪವಾಡದಿಂದ ಸೃಷ್ಟಿಯಾಗಿದೆಂಬ ನಂಬಿಕೆ ಐತಿಹ್ಯಗಳ ಪುರಾಣಗಳ ಹಿನ್ನೆಲೆಯನ್ನು ಹೇಳುತ್ತಾ ಅವುಗಳಿಗೆ ದೈವತ್ವದ ಪವಿತ್ರ ಶ್ರೇಷ್ಠ ಪೂಜ್ಯನೀಯ ಸ್ಥಾನಮಾನ ಕೊಟ್ಟು ಪೂಜಿಸುವುದನ್ನು ಕಾಣಬಹುದು.

ವೃತ್ತಿಗಾಯಕರ ಬದುಕಿನ ಕ್ರಮದ ಬಗ್ಗೆ ತಮ್ಮದೆಯಾದ ನಂಬಿಕೆಗಳು, ಆದರ್ಶಗಳನ್ನು ಅನುಸರಿಸುವರು. ಇವರು ಚಲನಶೀಲ ವ್ಯಕ್ತಿಗಳಾಗಿ, ಒಂದುಕಡೆ ನೆಲೆನಿಲ್ಲದೆ ನಿರಂತರವಾಗಿ ಅಲೆಮಾರಿಗಳಾಗಿ ತಮ್ಮ ಹೊಟ್ಟೆ ಹೊರೆಯುತ್ತಾರೆ. ಇವರು ತಮ್ಮ ಆಹಾರ ಸಂಗ್ರಹಣೆಗಾಗಿ ಬೇಟೆ, ಪಶುಸಾಗಾಣಿಕೆ, ಕೂಲಿ, ಭೀಕ್ಷಾಟನೆ ಅವಲಂಬಿಸಿರುವರು "ಮೂಲತಃ ಅಗತ್ಯಕ್ಕಿಂತ ಹೆಚ್ಚು ಆಹಾರವನ್ನಾಗಿಲಿ ಇತರೆ ಪದಾರ್ಥಗಳನ್ನಾಗಲಿ ಸಂಗ್ರಹಿಸಿದ ಅಲೆಮಾರಿಗಳ ಜೀವನ ಕ್ರಮ ಮತ್ತು ಶೈಲಿಗಳೇ ಉದಾರವಾದವು" ಇದನ್ನು ಆದರ್ಶದಲ್ಲಿಡದೆ ವೃತ್ತಿಗಾಯಕರು, ನೆಲೆನಿಂತು ಸಂಗ್ರಹ ಕಾರ್ಯದಲ್ಲಿ ತೊಡಗಿ ಪರಸ್ಪರ ಸಂಘರ್ಷದಲ್ಲಿ ತೊಡಗಿರುವ ಸಮಾಜಕ್ಕೆ ಒಂದು ಬಗೆಯಲ್ಲಿ ಮಾದರಿಯಾಗಿರುವರು. ಅಂದಂದಿನ ಆಹಾರ ಅಗತ್ಯಗಳನ್ನಷ್ಟೆ ಪೂರೈಸಿಕೊಳ್ಳುವುದು ಅವರ ಅಲ್ಪ ತೃಪ್ತಿಗೆ ನಮ್ಮ ಸಂಸ್ಕೃತಿಗೆ ಆದರ್ಶಪ್ರಾಯವಾಗಿದೆ.

ಇವರು ಪ್ರದರ್ಶನಾತ್ಮಕ ಕಲೆಗಳನ್ನು, ಕಥಾಮೇಳಗಳನ್ನು ಏರ್ಪಡಿಸುತ್ತಾ ಭೀಕ್ಷಾಟನೆ ಮಾಡುವ ಸಂದರ್ಭದಲ್ಲಿ ಹಾಡುತ್ತಾ ಮೌಖಿಕ ಪರಂಪರೆಯನ್ನು ತಮ್ಮ ಕಂಠಸ್ಥ ರೂಪದಲ್ಲಿ ಉಳಿಸಿ ಪರಂಪರಾಗತವಾಗಿ ತಲಾ ತಲಾಂತರದಿಂದ ಕಾಪಾಡಿಕೊಂಡು ಬಂದಿರುವುದನ್ನು ಕಾಣಬಹುದು.

ಇವರು ತಮ್ಮ ವೃತ್ತಿಯಲ್ಲಿ ಮೌಖಿಕ ಸಾಹಿತ್ಯದ ಪ್ರಕಾರಗಳಾದ ಕಥೆ, ಕಾವ್ಯ, ಕಥನ ಗೀತೆ, ಐತಿಹ್ಯ, ಸೋಬಾನೆ, ಮಹಾಭಾರತ, ರಾಮಾಯಣ, ಗಾದೆ, ಒಡಪು, ಒಗಟುಗಳು ಮೊದಲಾದವುಗಳನ್ನು ಯಾವುದೇ ಶಿಷ್ಟ ಅಥವಾ ಗ್ರಾಂಥಿಕ ಸಾಹಿತ್ಯದಲ್ಲಿ ಕಲಿಯದೆ ವಂಶ ಪರಂಪರಾಗತವಾಗಿ ಇಲ್ಲವೆ ಗುರು ಮುಖೇನ ಕಲಿತು ಹಾಡುವುದನ್ನು ಕಾಣಬಹುದು. ತಮ್ಮ ಗಾಯನ ಸಂದರ್ಭದಲ್ಲಿ ಆಡುವ ಮಾತಿನ ಮೂಲಕ ತಮ್ಮ ಪ್ರಾದೇಶಿಕ ಭಾಷಿಕ ನೆಲೆಯಲ್ಲಿ ಕಂಠಸ್ಥ ರೂಪದಲ್ಲಿ ದೀರ್ಘವಾದರೂ ಕಾವ್ಯಗಳು. ಕಥನಗೀತೆಗಳು ಮೇಲೆ ಪ್ರದರ್ಶನ ಮೇಳಗಳನ್ನು ಏರ್ಪಡಿಸುತ್ತಾ ಸಾರ್ವಜನಿಕರಿಂದ ಅಥವಾ ಜನಪದರಿಂದ ಕೊಟ್ಟಷ್ಟು ದವಸ-ಧಾನ್ಯಗಳನ್ನು, ಹಣ, ಉಡುಗೊರೆಗಳನ್ನು ಸ್ವೀಕರಿಸುತ್ತಾ ಉಪಜೀವಿಸುವ ಇವರು ನಮ್ಮ ಸಂಸ್ಕೃತಿಯ ಧರ್ಮದ ಅವಿಭಾಜ್ಯ ಅಂಗವಾಗಿ ನಿಸ್ವಾರ್ಥವಾಗಿ ಸೇವೆ ಸಲ್ಲಿಸುವುದನ್ನು ಗುರುತಿಸಬಹುದು. ಸಾಂಸ್ಕೃತಿಕ ರಾಯಭಾರಿಗಳಾಗಿ, ಧರ್ಮ ಪ್ರಚಾರಕರಾಗಿ, ಬಯಲು ಮನರಂಜನೆ ಕೇಂದ್ರವಾಗಿ, ಭವಿಷ್ಯ ತಜ್ಞರಾಗಿ ಇವರ ಪಾತ್ರ ಅನನ್ಯ.

ನಮ್ಮ ಜನಪದರು ಶ್ರಮ ಜೀವಿಗಳಾಗಿದ್ದು, ತಮ್ಮ ದಣಿವಿನ ನಿವಾರಣೆಗಾಗಿ ಹಾಡುಗಳನ್ನು, ಕಥೆಗಳನ್ನು ಹಾಡುವುದು, ಹೇಳುವುದರ ಮೂಲಕ ವಿಶ್ರಾಂತಿ ಪಡೆಯುತ್ತಾ ನಮ್ಮ ಮೌಖಿಕ ಪರಂಪರೆಯನ್ನು ಪಂರಪರಾಗತವಾಗಿ ವರ್ಗಾಯಿಸಲ್ಪಡುವರು. ತಮ್ಮ ಹಬ್ಬ-ಹರಿದಿನ, ಜಾತ್ರೆ, ಉತ್ಸವ, ಹೊಲ-ಮನೆ ಕಾರ್ಯಗಳಲ್ಲಿ ಸಂತೋಷಕ್ಕಾಗಿ ಸಾಂಘಿಕ, ಸಹಕಾರ ಜೀವನದ ಪ್ರತೀಕವಾಗಿ, ಮನರಂಜನೆಗಾಗಿ ಧರ್ಮದ, ಆರಾಧ್ಯ ದೈವದ, ಕುಲದೇವರ ಆರಾಧನೆಗಾಗಿ, ಐತಿಹಾಸಿಕ, ಸಾಮಾಜಿಕ ಆದರ್ಶಗಳ ಪರಿಪಾಲನೆಗಾಗಿ ಪರಿಣಿತ ಅರೆವೃತ್ತಿಗಾಯಕರನ್ನು ಆಹ್ವಾನಿಸಿ ಅವರಿಂದ ಕಲಾಪ್ರದರ್ಶನಗಳನ್ನು ಏರ್ಪಡಿಸುವುದರ ಮೂಲಕ ನಮ್ಮ ಸಂಸ್ಕೃತಿಯ ಪ್ರಚಾರಕರಾಗಿ ಕಾರ್ಯನಿರ್ವಹಿಸುವುದನ್ನು ಗುರುತಿಸಬಹುದು.

ಅರೆವೃತ್ತಿಗಾಯಕರು ತಮ್ಮ ಮೂಲ ವೃತ್ತಿಯ ಜೊತೆಗೆ ತಾವು ಕಲಿತ ಮೌಖಿಕ ಪರಂಪಾರಿಕ ವಿದ್ಯೆಯನ್ನು ಪಂರಪರಾಗತವಾಗಿ ಉಳಿಸಿ, ಬೆಳೆಸಿ ನಿಸ್ವಾರ್ಥವಾಗಿ ಸೇವೆ ಸಲ್ಲಿಸುವರು. ಅರೆವೃತ್ತಿಗಾಯಕರಾದ ಕೋಲಾಟದವರು ತಮ್ಮ ಆಟದ ಮೂಲಕ ದೈಹಿಕ, ಮಾನಸಿಕ, ಮನರಂಜನೆ, ಇಲ್ಲಿನ ಕುಲದೇವರು, ಸಾಂಸ್ಕೃತಿಕ ನಾಯಕರು, ಐತಿಹಾಸಿಕ, ಆದರ್ಶ ಪುರುಷರ ಮೇಲೆ ಕಥೆಗಳು, ಕಾವ್ಯ, ಕಥನ ಗೀತೆ, ಲಾವಣಿಗಳು, ಒಡಪುಗಳು, ಗಾದೆಗಳ ಮೂಲಕ ತಮ್ಮ ಕಂಠಸ್ಥ ರೂಪದಲ್ಲಿ ಹಾಡುವರು. ನಮ್ಮ ಜನಪದರಲ್ಲಿ ಆಧ್ಯಾತ್ಮಿಕತೆ ಮತ್ತು ದೈವದ ಬಗ್ಗೆ ಅತಿಯಾದ ಶ್ರದ್ಧೆ, ನಿಷ್ಠೆ,

ಭಯ-ಭಕ್ತಿ, ಲೌಕಿಕ ಜೀವನದಿಂದ ವಿಮುಕ್ತಿ ಪಡೆದು ಆದರ್ಶಮಯ ಜೀವನ ನಡೆಸಲು ಭಜನೆಯವರ ಪಾತ್ರ ಅನನ್ಯ.

ಸೋಬಾನೆಯವರು ಗ್ರಾಮೀಣ ಸಾಮಾಜಿಕ, ಧಾರ್ಮಿಕ ವಿಧಿಯಾಚರಣೆಗಳಲ್ಲಿ ಆಯಾ ಸಂದರ್ಭಕ್ಕೆ ತಕ್ಕಂತೆ, ಕಾರ್ಯಕ್ಕೆ ತಕ್ಕಂತೆ ಹಾಡು ಹಾಡುತ್ತಾ ನಮ್ಮ ಸಂಸ್ಕೃತಿಯ ಮೌಖಿಕ ನೆಲೆಯನ್ನು ಪಂರಪರಾಗತವಾಗಿ ವರ್ಗಾಯಿಸುತ್ತಾರೆ. ಬಯಲಾಟದವರು ನಮ್ಮ ಜನಪದರಲ್ಲಿ ಐತಿಹಾಸಿಕ, ಪೌರಾಣಿಕ, ಸಾಮಾಜಿಕ, ಆದರ್ಶಮಯ ಕಥಾಮೇಳ, ಪ್ರದರ್ಶನಕಲೆಗಳ ಮೂಲಕ ಅವರಲ್ಲಿ ಮನರಂಜನೆ, ನೈತಿಕ, ಧಾರ್ಮಿಕ, ಆದರ್ಶಮಯ ಜೀವನ ನಡೆಸಲು ಸಹಕಾರಿಯಾಗಿದೆ.

ಒಟ್ಟಿನಲ್ಲಿ ಹೇಳುವುದಾದರೆ ಇವರು ತಮ್ಮ ವೃತ್ತಿ ಮೂಲದ ಬಗ್ಗೆ ಸಾಮಾಜಿಕ ಜೀವನದ ಸಂಪರ್ಕಕ್ಕೆ ಸಂಸ್ಕೃತಿಯ ರಕ್ಷಣೆಗೆ ಪ್ರಮುಖವಾಗಿ ತಾವು ನಂಬಿರುವ ದೈವದಲ್ಲಿನ ಭಯ-ಭಕ್ತಿ, ಶ್ರದ್ಧೆ, ನಿಷ್ಠೆಯೇ ಇಂದಿಗೂ ಅವರಲ್ಲಿ ಮೌಖಿಕ ಪರಂಪರೆಯ ಹಾಡುಗಾರಿಕೆ ವೃತ್ತಿ ಉಳಿದುಕೊಂಡು ಬಂದಿರುವುದಕ್ಕೆ ಮೂಲ ಕಾರಣವಾಗಿದೆ. ಇವರು ತಮ್ಮ ವೃತ್ತಿ ಜೀವನದಲ್ಲಿ ಧರ್ಮ, ದೈವ, ಬದುಕಿನ ಬವಣೆಯ ಅವಿನಾಭಾವ ಸಂಬಂಧವನ್ನು ದೃಢವಾಗಿ ಹೊಂದಿರುವುದನ್ನು ನಂಬಿದ್ದಾರೆ.

**೫.೪. ಸಲಹೆ ಮತ್ತು ಪರ್ಯಾಯಗಳು :**

ಒಂದು ಕಾಲದಲ್ಲಿ ರಾಜಾಶ್ರಯ, ಗೂಡಚಾರರಾಗಿ, ನೈತಿಕ, ಸಾಮಾಜಿಕ, ಮನೋವೈಜ್ಞಾನಿಕ ಮಾಸ್ತರರಾಗಿ ನಾಡಿನ ಸಾಂಸ್ಕೃತಿಕ ರಾಯಭಾರಿಗಳಾಗಿ ಮೌಖಿಕ ಪರಂಪರೆಯ ಆಸ್ತಿಗಳಾಗಿದ್ದ ಇವರ ಬದುಕಿನ ಮೇಲೆ ಆಧುನಿಕತೆಯ ಕೂಸುಗಳಾದ ಕೈಗಾರೀಕರಣ, ನಗರೀಕರಣ, ಜಾಗತೀಕರಣ, ಉದಾರೀಕರಣ ಮತ್ತು ಸಮೂಹ ಮಾಧ್ಯಮಗಳು ಮೊದಲಾದವು ತಮ್ಮ ಕಬಂಧ ಬಾಹುಗಳನ್ನು ಚಾಚಿದಂತೆ ಇವರ ಪಾರಂಪರಿಕ ಕಸುಬಿಗೆ ಕೊಡಲಿ ಪೆಟ್ಟು ಬಿದ್ದಂತಾಯಿತು. ಹಾಡುಗಾರಿಕೆಯನ್ನೆ ನಂಬಿ ಬದುಕುತ್ತಿರುವ ಇವರು ಇಂದು ಅನ್ಯ ವೃತ್ತಿಗಳನ್ನು ಅವಲಂಬಿಸಿ ಮನೆ-ಮಠ, ಭೂಮಿ, ಮಕ್ಕಳಿಗೆ ಶಿಕ್ಷಣವಿಲ್ಲದೆ ಸಮಾಜದಲ್ಲಿ ಗೌರಯುತವಾಗಿ ಬದುಕಲು ಅವಕಾಶವಿಲ್ಲದೆ ಬವಣೆ ಅಥವಾ ಕಷ್ಟ ಪಡುವುದನ್ನು ಕಾಣಬಹುದು. ಈಗ ಇವರಿಗೆ ಇರುವ ಕಾನೂನಾತ್ಮಕ ರಕ್ಷಣೆ, ಸೌಲತ್ತುಗಳು ಮತ್ತು ಸರ್ಕಾರದ ಘೋಷಿತ ಯೋಜನೆಗಳು ಪ್ರಮಾಣಿಕವಾಗಿ, ಸಮರ್ಪಕ ರೀತಿಯಲ್ಲಿ ಜಾರಿಗೊಳಿಸಿ ಅವರ ಅಭಿವೃದ್ಧಿಯನ್ನು ಸಾಧಿಸುವುದರ ಮೂಲಕ ಸಾಮಾಜಿಕ ಸಮಾನತೆಗೆ ಅವಕಾಶ ಕಲ್ಪಿಸಿಕೊಡಬೇಕು. ಇವುಗಳ ಜೊತೆಗೆ ಅವರ ಆರ್ಥಿಕ, ರಾಜಕೀಯ, ಸಾಂಸ್ಕೃತಿಕ ಅಭಿವೃದ್ಧಿಯನ್ನು ಸಾಧಿಸಲು ಈ ಕೆಳಕಂಡ ಅಂಶಗಳನ್ನು ಗುರುತಿಸಿದೆ.

* ಸಮೂಹ ಮಾಧ್ಯಮಗಳಲ್ಲಿ ಇವರ ಹಾಡುಗಳನ್ನು ಬಿತ್ತರಿಸುವುದರ ಮೂಲಕ ನಮ್ಮ ಮೌಖಿಕ ಪರಂಪರೆಯ, ಸಂಸ್ಕೃತಿಯ ಮರುಚಿಂತನೆಗೆ ಅವಕಾಶ ನೀಡಿದಂತಾಗುತ್ತದೆ.

* ಆರ್ಥಿಕವಾಗಿ ಹಿಂದುಳಿದ, ಬಡವರಾಗಿರುವ ಇವರಿಗೆ ಸ್ವಯಂ ಉದ್ಯೋಗಗಳನ್ನು ಕೈಗೊಳ್ಳಲು ಸರ್ಕಾರದಿಂದ ಧನಸಹಾಯ ಮತ್ತು ಬ್ಯಾಂಕುಗಳಿಂದ ಸಾಲ ಸೌಲಭ್ಯತೆಯನ್ನು ಒದಗಿಸಿ ಅವರ ಅಭಿವೃದ್ಧಿಗೆ ಸಹಕರಿಸುವುದರ ಮೂಲಕ ಆರ್ಥಿಕ ಅಭಿವೃದ್ಧಿಗೆ ಅವಕಾಶ ಕಲ್ಪಿಸಿಕೊಡುವುದು.

* ಸದಾ ಅಲೆಮಾರಿಗಳಾದ ವೃತ್ತಿಗಾಯಕ ಸಮುದಾಯದ ಮಕ್ಕಳ ಶಿಕ್ಷಣಕ್ಕೆ ವಿಶೇಷ, ಅಗತ್ಯ ಶೈಕ್ಷಣಿಕ ಕಾರ್ಯಕ್ರಮಗಳನ್ನು ಅವರಿರುವ ಸ್ಥಳದಲ್ಲಿಯೇ ಕಲ್ಪಿಸಿ ಸಾರ್ವತ್ರಿಕ ಶಿಕ್ಷಣದ ಉದ್ದೇಶವನ್ನು ಈಡೇರಿಸಲು ಸಹಕಾರಿಯಾಗುವುದು.

* ಆರ್ಥಿಕವಾಗಿ ದುರ್ಬಲವಾಗಿರುವ ಇವರು ಇಂದು ನೇರ ಚುನಾವಣೆಗಳಲ್ಲಿ ಸ್ಪರ್ಧಿಸಿ ಜಯಗಳಿಸಲು ಸಾಧ್ಯವಿಲ್ಲದಿದ್ದರಿಂದ ಇವರನ್ನು ಪಂಚಾಯತ್‌ರಾಜ್ ಸಂಸ್ಥೆಗಳಿಗೆ ನಾಮಕರಣ ಮಾಡುವುದರ ಮೂಲಕ ರಾಜಕೀಯ ಪ್ರಾತಿನಿಧ್ಯ ದೊರಕಿಸಿ ಆಡಳಿತದಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುವಂತೆ ಮಾಡುವುದು.

* ಈ ಸಮುದಾಯಗಳ ಅಭಿವೃದ್ಧಿಗೆ ಅಭಿವೃದ್ಧಿ ನಿಗಮಗಳ ಸ್ಥಾಪನೆ ಮತ್ತು ಇವರಿಗೆ ಸಂಬಂಧಿಸಿದ ಯೋಜನೆಗಳ ಕಾರ್ಯಾನುಷ್ಠಾನದಲ್ಲಿನ ಭ್ರಷ್ಟತೆಯನ್ನು ನಿಯಂತ್ರಿಸಬೇಕು.

* ಮಾಶಾಸನಗಳನ್ನು ಪಡೆಯಲು ಈಗಿರುವ ಅರ್ಹತೆ, ನಿರ್ಬಂಧಗಳನ್ನು ಸಡಿಲಿಸಿ ಎಲ್ಲಾ ಕಲಾವಿದರಿಗೂ ಮಾಶಾಸನ ಕೊಡುವುದರ ಮುಖೇನ ಅವರ ಅಭಿವೃದ್ಧಿಗೆ ಸಹಕರಿಸುವುದು.

* ಪಾರಂಪರಿಕ ಕಲೆಗಳಾದ ಹಾಡುಗಾರಿಕೆ, ಬಯಲಾಟ, ಸೋಬಾನೆ, ಕೋಲಾಟ ಪ್ರದರ್ಶನ ಮೊದಲಾದ ಜನಪದ ಕಲೆಗಳನ್ನು ರಕ್ಷಿಸಲು ಇಂದಿನ ಯುವಪೀಳಿಗೆಗೆ ತರಬೇತಿ ನೀಡುವುದರ ಮೂಲಕ ನಮ್ಮ ಸಂಸ್ಕೃತಿಯನ್ನು ರಕ್ಷಿಸಲು ಅನುವು ಮಾಡಿಕೊಡಬೇಕು.

* ಆಧುನಿಕ ನಾಗರೀಕತೆಯ ಉದ್ಯೋಗಗಳು ಲಭಿಸುವಂತೆ ವೃತ್ತಿಗಾಯಕರ ಮಕ್ಕಳಿಗೆ ವಿಶೇಷ ಉದ್ಯೋಗ ಕೌಶಲ್ಯ ತರಬೇತಿಗಳನ್ನು ನೀಡಿ ಅಲ್ಲಿ ನೌಕರಿ ಸಿಗುವಂತೆ ಮಾಡಬೇಕು.

* ಸದಾ ಸಂಚಾರಿಗಳಾದ ಇವರಿಗೆ ಮೂಲಭೂತ ಸೌಕರ್ಯಗಳನ್ನೊಳಗಂಡ ನಿವೇಶನ, ವಸತಿಗಳ ನಿರ್ಮಾಣ ಮಾಡಿ, ಒಂದು ಕಡೆ ನೆಲೆನಿಂತು ವಾಸಿಸಲು ಅವಕಾಶ ಕಲ್ಪಿಸಿಕೊಡಬೇಕು.

* ಮತದಾರರ ಪಟ್ಟಿಯಿಂದ ವಂಚಿತವಾಗಿರುವ ಇವರಿಗೆ ಮತದಾರರ ಗುರುತಿನ ಚೀಟಿ, ಆಹಾರ ಸರಬರಾಜು ಚೀಟಿಗಳ ವಿತರಣೆಯ ಪ್ರಮಾಣಿಕ ಪ್ರಯತ್ನ ಮಾಡಿ ದೈನಂದಿನ ಎರಡು ಹೊತ್ತಿನ ಊಟಕ್ಕಾಗಿ ಕಷ್ಟಪಡುತ್ತಿರುವ ಇವರನ್ನು ವಿಮುಕ್ತಿಗೊಳಿಸಬೇಕು.

* ಈ ಸಮುದಾಯಗಳ ಪ್ರತಿಯೊಂದು ಕುಟುಂಬಗಳಿಗೆ ಭೂ ಒಡೆತನದ ಹಕ್ಕನ್ನು ಕಲ್ಪಿಸಿಕೊಟ್ಟು ಅವರನ್ನು ಕೃಷಿಕರನ್ನಾಗಿಸಿ, ಆರ್ಥಿಕ ಸ್ವಾವಲಂಬಿತನಕ್ಕೆ ಅವಕಾಶ ಕಲ್ಪಿಸಿಕೊಡಬೇಕು ಮತ್ತು ಉಚಿತ ಬೀಜ, ಗೊಬ್ಬರ, ಕೀಟನಾಶಕಗಳನ್ನು ಕಲ್ಪಿಸಿಕೊಡಬೇಕು.

* ಇವರಲ್ಲಿರುವ ಕರಕುಶಲ ಕಲೆಗಳನ್ನು ಗುರುತಿಸಿ ವಿಶೇಷ ತರಬೇತಿ ಮತ್ತು ಧನಸಹಾಯ ನೀಡಿ ಗೃಹ ಕೈಗಾರಿಕೆಗಳಿಗೆ ಪ್ರೋತ್ಸಾಹ ನೀಡಿ ಅವರ ಅಭಿವೃದ್ಧಿಗೆ ಸಹಕರಿಸುವುದು.
* "ಪರಂಪರಾಗತವಾಗಿ ಸಾಂಸ್ಕೃತಿಕ ಹಿನ್ನೆಲೆಯುಳ್ಳ ಈ ಸಮುದಾಯದ ಕಲಾವಿದರನ್ನು, ಜನಪದ ಯಕ್ಷಗಾನ, ನಾಟಕ, ಲಲಿತಕಲಾ ಅಕಾಡೆಮಿಗಳ ಮತ್ತು ವಿವಿಧ ಪ್ರಾಧಿಕಾರಗಳಿಗೆ ಸದಸ್ಯರನ್ನಾಗಿ ನೇಮಕ ಮಾಡಿ ಈ ಸಾಂಸ್ಕೃತಿಕ ಸಂಸ್ಥೆಗಳಲ್ಲಿ ಸಕ್ರಿಯವಾಗಿ ಭಾಗವಹಿಸುವಂತೆ ಮಾಡಬೇಕು"[೪]
* ವೃತ್ತಿಗಾಯಕ ಸಮುದಾಯಗಳ ಸ್ತ್ರೀಯರಿಗೆ ಆರ್ಥಿಕ, ಸಾಮಾಜಿಕ ಸಮಾನತೆಗೆ ವಿಶೇಷ ಸೌಲತ್ತುಗಳನ್ನು ಕಲ್ಪಿಸಿಕೊಡುವುದರ ಮೂಲಕ ಲಿಂಗತಾರತಮ್ಯ ನಿವಾರಣೆ ಮಾಡಬೇಕು.
* ಇವರಲ್ಲಿರುವ ಧೂಮಪಾನ, ಮಧ್ಯಪಾನ, ಬಾಲ್ಯವಿವಾಹ, ಪ್ರಾಣಿಬಲಿ ಮೊದಲಾದ ಸಮಸ್ಯೆಗಳ ಬಗ್ಗೆ ಜಾಗೃತಿ ಮೂಡಿಸಿ ವಿಶೇಷ ತರಬೇತಿಯ ಮೂಲಕ ಅವುಗಳಿಂದ ಮುಕ್ತಿಗೊಳಿಸುವುದು.

"ನಮ್ಮ ಸಂಸ್ಕೃತಿಯ ಜೀವನದ ನೀತಿ-ನಿಯಮಗಳನ್ನು, ಆಚಾರ-ವಿಚಾರಗಳನ್ನು ಹಾಡುಗಾರಿಕೆ ಉಳಿಯಬೇಕಾದರೆ, ವೃತ್ತಿಗಾಯಕರು ಉಳಿಯಬೇಕು. ಇವರು ಬೆಳೆಯಬೇಕಾದರೆ ಜನತೆ ಮತ್ತು ಸರಕಾರ ಪೋಷಣೆ ಸಹಕಾರ ನೀಡಿದರೆ ಮಾತ್ರ ನಮ್ಮ ಸಂಸ್ಕೃತಿಯ ತಾಯಿಬೇರುಗಳಾದ ವೃತ್ತಿಗಾಯಕರು ಉಳಿದು, ಬೆಳೆದು ಸಾಮಾನ್ಯ ಜನರ ಬದುಕಿಗೆ ಬುನಾದಿಯಾಗುವರು"[೫] ಈ ಅಭಿಪ್ರಾಯ ವೃತ್ತಿಗಾಯಕರ ವಾಸ್ತವತೆಯನ್ನು ತಿಳಿಸುತ್ತದೆ. ಆದ್ದರಿಂದ ಅಳಿವಿನಂಚಿನಲ್ಲಿರುವ ವೃತ್ತಿಗಾಯಕರಿಗೆ ಪ್ರೋತ್ಸಾಹ, ಬೆಂಬಲ, ಸಹಕಾರ ನೀಡಿ ನಮ್ಮ ಮೌಖಿಕ ಪರಂಪರೆಯ ಸಂಸ್ಕೃತಿಯನ್ನು ಸಂರಕ್ಷಿಸುವುದ ನಮ್ಮ ಮತ್ತು ಸರ್ಕಾರದ ಆದ್ಯ ಕರ್ತವ್ಯ.

## ಕೊನೆ ಟಿಪ್ಪಣಿಗಳು

೧. ಕ.ವಿ.ವಿ. ಹಂಪಿ, ಕರ್ನಾಟಕ ಜನಸಮುದಾಯ ರಾಜ್ಯಕೋಶ ಸಂಪುಟ-೪, ಪು-೭೧

೨. ಸ.ಚಿ. ರಮೇಶ, ಅಲೆಮಾರಿಗಳ ಸ್ಥಿತಿಗತಿ ಪು-೧೪೮

೩. ಸ.ಚಿ. ರಮೇಶ, ಅಲೆಮಾರಿಗಳ ಸ್ಥಿತಿಗತಿ ಪು-೧೪೨

೪. ಕುಪ್ಪೆ ನಾಗರಾಜ, ದೊಂಬಿದಾಸ ಪು-೧೨೭

೫. ಚೆನ್ನಣ್ಣ ವಾಲೀಕಾರ, ಜನಪದಲೋಕ ಪು-೬೩

# ಅಧ್ಯಾಯ – ಆರು

# ಸಮಾರೋಪ

* ಸಮಾರೋಪ
* ಅಧ್ಯಯನದ ಫಲಿತಗಳು
* ಅನುಬಂಧ
* ಗ್ರಂಥಋಣ
* ವಕ್ತೃಗಳ ವಿವರ
* ಛಾಯಾಚಿತ್ರಗಳು

# ಅಧ್ಯಾಯ – ೬
# ಸಮಾರೋಪ

ನಮ್ಮ ನಾಡಿನ ಸಾಂಸ್ಕೃತಿಕ ಪರಂಪರೆಯಲ್ಲಿ ಮೌಖಿಕ ಸಾಹಿತ್ಯ ಮತ್ತು ಜನಪದ ಕಲೆಗಳಿಗೆ ಒಂದು ವಿಶಿಷ್ಟ ಸ್ಥಾನವಿದೆ. ವೃತ್ತಿಗಾಯಕ ಕಲಾವಿದರ ಕಲೆಯ ವೈಶಿಷ್ಟ್ಯವನ್ನು ಗುರುತಿಸುವಂತಹ ಧಾರ್ಮಿಕ, ಸಾಮಾಜಿಕ ಆಚರಣೆಗಳು ಸಂಪ್ರದಾಯಗಳು, ನಂಬಿಕೆಗಳು, ಹಬ್ಬ–ಹರಿದಿನಗಳು, ಜಾತ್ರೆ, ಉತ್ಸವ ಹಾಗೂ ಜೀವನ ಕ್ರಮಗಳಲ್ಲಿ ಪ್ರಾದೇಶಿಕ ಭಿನ್ನತೆಯನ್ನು ಗುರುತಿಸಬಹುದು.

ವೃತ್ತಿ–ಅರೆವೃತ್ತಿಗಾಯಕರಾದ ಚೌಡಿಕೆಯವರು, ಕಿನ್ನರಿಜೋಗಿಗಳು, ದೊಂಬಿದಾಸರು, ಸುಡಗಾಡುಸಿದ್ಧರು, ಬಯಲಾಟದವರು, ಭಜನೆ ಮೇಳದವರು,. ಸೋಬಾನೆಯರು, ಕೋಲಾಟದವರು, ಕಥೆ, ಪುರಾಣ ಹೇಳುವವರು ಮೊದಲಾದ ವೃತ್ತಿ–ಅರೆವೃತ್ತಿಗಾಯಕರ ವೈಶಿಷ್ಟ್ಯ ವ್ಯತ್ಯಾಸಗಳನ್ನು ನಾಯಕನಹಟ್ಟಿ ಪರಿಸರದಲ್ಲಿ ನೋಡಬಹುದು. ಇಂತಹ ಭಿನ್ನತೆ, ವೈಶಿಷ್ಟ್ಯತೆಗಳನ್ನು ಗುರುತಿಸಿ ವೃತ್ತಿ–ಅರೆವೃತ್ತಿಗಾಯಕರ ಮೌಖಿಕ ಜ್ಞಾನ ಪರಂಪರೆಯನ್ನು ದಾಖಲಿಸುವ, ಗುರುತಿಸುವ ಅವಶ್ಯಕತೆ ಇರುವುದರಿಂದ ಆ ನಿಟ್ಟಿನಲ್ಲಿ "ನಾಯಕನಹಟ್ಟಿ ಪರಿಸರದ ಮೌಖಿಕ ಸಾಹಿತ್ಯದಲ್ಲಿ ವೃತ್ತಿ–ಅರೆವೃತ್ತಿಗಾಯಕರು: ಸಾಂಸ್ಕೃತಿಕ ಅಧ್ಯಯನ" ಎಂಬ ವಿಷಯದ ಮೇಲೆ ಅಧ್ಯಯನವನ್ನು ಕೈಗೊಂಡು ಪೂರ್ಣಗೊಳಿಸಲಾಗಿದೆ.

ನಾಯಕನಹಟ್ಟಿ ಹೋಬಳಿ ಕೇಂದ್ರವಾಗಿದ್ದು, ೩೨ ಹಳ್ಳಿಗಳನ್ನೊಳಗೊಂಡ ವ್ಯವಹಾರಿಕ, ಧಾರ್ಮಿಕ, ರಾಜಕೀಯ, ಸಾಂಸ್ಕೃತಿಕ ಕೇಂದ್ರಬಿಂದುವಾಗಿದೆ. ಇದು ಶ್ರೀಗುರು ತಿಪ್ಪೇಸ್ವಾಮಿಯ ಧಾರ್ಮಿಕ ಕ್ಷೇತ್ರವಾಗಿ, ಬುಡಕಟ್ಟು ಸಂಸ್ಕೃತಿಯ ನೆಲೆಯಾಗಿದೆ. ಹಿಂದಿನಿಂದಲೂ ಹಟ್ಟಿ ಪಾಳೆಗಾರರ ಆಡಳಿತಕ್ಕೆ ಒಳಪಟ್ಟಿರುವುದನ್ನು ಚರಿತ್ರೆಯಿಂದ ತಿಳಿಯಬಹುದು. ಇಲ್ಲಿ ಜನಪದ ಆಟ, ಕಲೆ,

ಜನಪದ ವೈದ್ಯ, ಸಾಹಿತ್ಯ ಮೊದಲಾದ ಪಾರಂಪರಿಕ ಜ್ಞಾನದ ನೆಲೆಯಾಗಿದ್ದು, ಈ ಪಾರಂಪರಿಕ ಮೌಖಿಕ ಪರಂಪರೆಯನ್ನು ತಲೆತಲಾಂತರವಾಗಿ ಕಂಠಸ್ಥರೂಪದಲ್ಲಿ ವರ್ಗಾಯಿಸುವಲ್ಲಿ ಮತ್ತು ಸಮಾಜದ ಸಾಂಸ್ಕೃತಿಕ ರಾಯಭಾರಿಗಳಾಗಿ ಕಾರ್ಯನಿರ್ವಹಿಸುವ ವೃತ್ತಿ–ಅರೆವೃತ್ತಿಗಾಯಕ ಸಮುದಾಯಗಳು ಕಂಡುಬರುತ್ತವೆ.

ನಾಯಕನಹಟ್ಟಿ ಧಾರ್ಮಿಕ, ಐತಿಹಾಸಿಕ ಹಾಗೂ ಸಾಂಸ್ಕೃತಿಕವಾಗಿ ಶ್ರೀಮಂತವಾಗಿದ್ದು, ಇಲ್ಲಿ ಅನೇಕ ವೃತ್ತಿ–ಅರೆವೃತ್ತಿಗಾಯಕ ಸಮುದಾಯಗಳ ನೆಲೆಯಾಗಿದೆ. ಅವರಲ್ಲಿ ಚೌಡಿಕೆಯವರು, ಕಿನ್ನರಜೋಗಿ, ದೊಂಬಿದಾಸ, ಸುಡಗಾಡುಸಿದ್ಧ, ಕೋಲಾಟ, ಭಜನೆ, ಬಯಲಾಟ, ಸೋಬಾನೆ ಮೊದಲಾದ ವೃತ್ತಿ–ಅರೆವೃತ್ತಿಗಾಯಕರು ವಾಸಿಸುವರು. ಇವರು ತಮ್ಮದೆ ಆದ ಪಾರಂಪರಿಕ ಸಂಪ್ರದಾಯಗಳು, ನಂಬಿಕೆಗಳನ್ನು ಹೊಂದಿರುವರು. ಇಂದಿಗೂ ಅವರ ಕಲಾಮೇಳ ಪ್ರದರ್ಶನಗಳನ್ನು, ಹಾಡುಗಳನ್ನು ನೋಡಬಹುದು. ಈ ನಿಬಂಧದಲ್ಲಿ ನಾಯಕನಹಟ್ಟಿಯ ಚಾರಿತ್ರಿಕ ಭೌಗೋಳಿಕ, ಸಾಂಸ್ಕೃತಿಕ ಹಿನ್ನಲೆಯನ್ನು ಗುರುತಿಸಿ ಅಲ್ಲಿನ ಸಾಂಸ್ಕೃತಿಕ ನಾಯಕರಗಳಾದ ಶ್ರೀಗುರುತಿಪ್ಪೆಸ್ವಾಮಿ, ಜಗಲೂರಪಾಪನಾಯಕ, ಗಾದ್ರಿಪಾಲನಾಯಕ, ಜುಂಜಪ್ಪನನ್ನು ಕುರಿತು ಮೌಖಿಕ ಪರಂಪರೆಯ ಹಿನ್ನಲೆಯಲ್ಲಿ ಕಾಣಬಹುದು. ನಮ್ಮ ರಾಜ್ಯದಲ್ಲಿ ಇದುವರೆಗೂ ನಡೆದಿರುವ ವೃತ್ತಿಗಾಯಕರನ್ನು ಕುರಿತ ಅಧ್ಯಯನಗಳ ಸಂಕ್ಷಿಪ್ತ ಮಾಹಿತಿನೀಡಿ, ಪ್ರಮುಖ ಗ್ರಂಥಗಳನ್ನು ಗುರುತಿಸಿದೆ. ಹಾಗೆಯೇ ವೃತ್ತಿಗಾಯಕರ ಪ್ರಕಾರಗಳಾದ ಧಾರ್ಮಿಕ, ಲೌಕಿಕ, ಅರೆವೃತ್ತಿಗಾಯಕರ ವರ್ಗೀಕರಣದಲ್ಲಿಯೇ ಇಲ್ಲಿನ ವೃತ್ತಿಗಾಯಕರನ್ನು ಕುರಿತು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಹೀಗಾಗಿ ರಾಜ್ಯದ ಬೇರೆ ಬೇರೆ ಪ್ರದೇಶಗಳ ವೃತ್ತಿಗಾಯಕರಿಗೆ ಮತ್ತು ಇಲ್ಲಿನ ವೃತ್ತಿಗಾಯಕರಿಗೆ ಇರುವ ಸಾಮ್ಯತೆ ಮತ್ತು ವೈಶಿಷ್ಟ್ಯತೆಗಳನ್ನು ಗುರುತಿಸಲು ಪೂರಕವಾಗುವಂತೆ ಈ ಅಧ್ಯಯನದಲ್ಲಿ ಪ್ರಯತ್ನ ಮಾಡಲಾಗಿದೆ.

ಈ ಅಧ್ಯಯನದಲ್ಲಿ ಅವರ ವೃತ್ತಿಮೂಲದ ಹಿನ್ನಲೆ, ಧಾರ್ಮಿಕ, ಸಾಮಾಜಿಕ ಸಂಪ್ರದಾಯಗಳು, ನಂಬಿಕೆಗಳು, ಮೌಖಿಕ ಸಾಹಿತ್ಯದಲ್ಲಿ ಅವರ ಹಾಡುಗಾರಿಕೆ, ಕಥಾಮೇಳ ಕಲಾಪ್ರದರ್ಶನ, ಪದ್ಧತಿ, ವಾದ್ಯಪರಿಕರಗಳು, ವೇಷಭೂಷಣಗಳು, ಭಾಷೆ ಜನಾಂಗ ಪರಿಚಯ ಮೊದಲಾದ ವಿಷಯಗಳನ್ನು ಕುರಿತು ತಿಳಿಸಲಾಗಿದೆ.

ಈ ಪರಿಸರದಲ್ಲಿ ಕಂಡುಬರುವ ಧಾರ್ಮಿಕ ಗಾಯಕರಾದ ಚೌಡಿಕೆಯವರು ಉಚ್ಚಂಗಿದುರ್ಗದ ಎಲ್ಲಮ್ಮನ ಆರಾಧಕರಾಗಿ, ದೀಕ್ಷೆ ಪಡೆದು, ಆ ಕ್ಷೇತ್ರದ ಧಾರ್ಮಿಕ ವಿಧಿಯಾಚರಣೆಗಳಲ್ಲಿ ಭಾಗವಹಿಸಿ ದೇವಿಯ ಕೃಪೆಗೆ ಪಾತ್ರರಾಗಲು ಹರಕೆ, ಮುಡುಪುಗಳನ್ನು ಸಲ್ಲಿಸುವುದನ್ನು ಕಾಣಬಹುದು. ಹಾಗೆಯೇ ತಮ್ಮ ಕಥಾಮೇಳಗಳಲ್ಲಿ ಎಲ್ಲಮ್ಮನ ಮಹಿಮೆಯನ್ನು ಹಾಡುತ್ತಾ ಮತ್ತು ಸ್ಥಳೀಯ ದೇವರುಗಳ ಕುರಿತು ಹಾಗೂ ತಮ್ಮದೇಯಾದ ಲಾಂಛನ, ವೇಷಭೂಷಣ ಧರಿಸಿ, ತಮ್ಮ

ವಾದ್ಯಪರಿಕರಗಳೊಂದಿಗೆ ಕಂಠಸ್ಥರೂಪದಲ್ಲಿ ಕಥಾಮೇಳ, ಹಾಡುಗಾರಿಕೆಯ ಮೂಲಕ ನೃತ್ಯ, ಸಂಗೀತ, ರಾಗ, ಲಯಗಳೊಂದಿಗೆ ಮೌಖಿಕ ಪರಂಪರೆಯನ್ನು ಪ್ರಚಾರ ಮಾಡವುದನ್ನು ಕಾಣಬಹುದು.

ಇಲ್ಲಿ ನೆಲೆಸಿರುವ ಲೌಕಿಕ ವೃತ್ತಿಗಾಯಕರಲ್ಲಿ ಕಿನ್ನರಿದೋಗಿಗಳು ಗುರುತಿಸಿಕೊಂಡು, ಮೊಳಕಾಲ್ಮೂರಿನ ನುಂಕೆಮಲೆಯ ಭೈರವನ ಆರಾಧಕರಾಗಿ ಇವರು ತಮ್ಮ ಮೂಲದ ಬಗ್ಗೆ ಪಾಂಡವರ ಅರ್ಜುನನೊಂದಿಗೆ ಸಮೀಕರಿಸಿಕೊಂಡು ಕುಲಮೂಲದ ಕಥನಗಳನ್ನು ಹಾಡುವುದನ್ನು ಗುರುತಿಸಿದೆ. ಸ್ಥಳೀಯ ದೇವರುಗಳಾದ ದಡ್ಲುಮಾರಮ್ಮ, ಗೌರಸಂದ್ರಮಾರಮ್ಮ, ಒಬಳದೇವರು ಮೊದಲಾದ ದೆವರಗಳ ಮೆಲೆ ಹಾಡುಗಾರಿಕೆಯನ್ನು ಕಾಣಬಹುದು. ಇವರ ವೇಷಭೂಷಣಗಳಿಂದ ಕಿನ್ನರಿವಾದ್ಯದಿಂದ ಮತ್ತು ತಮ್ಮ ಧೀರ್ಘವಾದ ಕಾವ್ಯಗಳ, ಕಥೆಗಳ ಮೂಲಕ ಶ್ರೋತೃಗಳನ್ನು ರಂಜಿಸುತ್ತಾ ಕಥಾಮೇಳಗಳನ್ನು ನಡೆಸುತ್ತಾ, ಅವರಿಂದ ದವಸ, ಧಾನ್ಯಗಳು, ಹಣ ಹಳೆಬಟ್ಟೆಬರೆಗಳನ್ನು ಪಡೆದು ಜೀವಿಸುವುದನ್ನು ನೋಡಬಹುದು.

ದೊಂಬಿದಾಸರು ವಿಷ್ಣುವಿನ ಆರಾಧಕರಾಗಿದ್ದು ಮಾತೃಭಾಷೆ ತೆಲುಗು ಆದರೂ ಕನ್ನಡದಲ್ಲಿ ಸುಲಲಿತವಾಗಿ ದಾಸರಕೀರ್ತನೆಗಳನ್ನು, ಐತಿಹಾಸಿಕ, ಪೌರಾಣಿಕ ನಾಟಕಗಳನ್ನು ಕುರಿತು ಹಾಡುವುದನ್ನು, ಕಥಾಮೇಳಗಳ ಪ್ರದರ್ಶನವನ್ನು ನೀಡುವರು.

ಸುಡುಗಾಡು ಸಿದ್ಧರು, ವೀರಭದ್ರನ, ಶಿವನ ಆರಾಧಕರಾಗಿ, ವಿಶಿಷ್ಟ ಆಚರಣೆಗಳನ್ನು ರೂಡಿಸಿಕೊಂಡು, ಜೊತೆಗೆ ಸ್ಥಳೀಯ ದೇವರು/ತೆಗಳ ಹೆಸರುಗಳಲ್ಲಿ ಸಂದರ್ಭಕ್ಕೆ ತಕ್ಕಂತೆ ಕಾವ್ಯ ಕಥಾ ರಚನೆ ಮಾಡಿ ಹಾಡುವುದರ ಮೂಲಕ ಮತ್ತು ತಮ್ಮ ಕೈಚಳಕದ ಮೋಡಿ ಪ್ರದರ್ಶನ, ನಾಟಿವೈದ್ಯದ ಮೂಲಕ ಜನಪದರ ಪ್ರೀತಿ ವಿಶ್ವಾಸಕ್ಕೆ ಪಾತ್ರರಾಗಿ ಅವರಿಂದ ಕಾಣಿಕೆ ಉಡುಗೊರೆಗಳನ್ನು ಸ್ವೀಕರಿಸಿ ಜೀವಿಸುವ ಇವರನ್ನು ಈ ಅಧ್ಯಯನದಲ್ಲಿ ಗುರುತಿಸಿದೆ.

ವೃತ್ತಿಗಾಯಕರಂತೆ, ಅರೆವೃತ್ತಿಗಾಯಕರು ಈ ಪರಿಸರದಲ್ಲಿ ಕಂಡುಬಂದಿದ್ದು, ಇವರನ್ನು ಈ ಅಧ್ಯಯನಕ್ಕೆ ಒಳಪಡಿಸಿದೆ. ಇಲ್ಲಿನ ಪ್ರತಿಯೊಂದು ಹಳ್ಳಿಗಳ ಸಮುದಾಯಗಳಲ್ಲಿ ತಮ್ಮದೆಯಾದ ಪರಂಪರಾಗತ ಮೌಖಿಕ ಪರಂಪರೆಯ ಜ್ಞಾನ, ಜನಪದ ಕಲೆಗಳ ನೈಪುಣ್ಯತೆ ಹೊಂದಿರುವ ಪರಿಣಿತಿ ಅರೆವೃತ್ತಿಗಾಯಕರು ಇಲ್ಲಿಕಂಡುಬರುವರು. ಇವರು ಇಲ್ಲಿ ನಡೆಯುವ ಜಾತ್ರೆ, ಉತ್ಸವ, ಹಬ್ಬ, ಹರಿದಿನ, ಹೊಲಮನೆ ಕಾರ್ಯಗಳಲ್ಲಿ ಆಹ್ವಾನದ ಮೆರೆಗೆ ಭಾಗವಹಿಸಿ ಮಾನವನ ಶಾರೀರಿಕ, ಬೌದ್ಧಿಕ, ವ್ಯಕ್ತಿತ್ವ, ಮನರಂಜನೆ, ತಾತ್ವಿಕಚಿಂತನೆ, ಆಧ್ಯಾತ್ಮಿಕತೆಯನ್ನು ರೂಪಿಸುವ ಬಯಲಾಟ, ಕೋಲಾಟ, ಭಜನೆ, ಸೋಬಾನೆಯವರು ತಮ್ಮ ಕಲಾಸೇವೆಯ ಮೂಲಕ ಮೌಖಿಕ ಸಾಹಿತ್ಯ, ಸಂಸ್ಕೃತಿಯ ಪ್ರಚಾರಕರಾಗಿ ಕಾರ್ಯನಿರ್ವಹಿಸುವುದನ್ನು ಕಾಣಬಹುದು.

ಪ್ರಸ್ತುತ ಅವರ ಸಾಮಾಜಿಕ, ಧಾರ್ಮಿಕ, ರಾಜಕೀಯ, ಆರ್ಥಿಕ, ಶೈಕ್ಷಣಿಕ ಮತ್ತು ಸಾಂಸ್ಕೃತಿಕ ಲಕ್ಷಣಗಳನ್ನು ಕುರಿತು ಅಧ್ಯಯನ ಮಾಡಿದೆ. ಹಾಗೆಯೇ ಅವರ ಸಮಸ್ಯೆಗಳಿಗೆ ಪರಿಹಾರ, ಸಲಹೆ ಸೂಚನೆಗಳನ್ನು ಅಧ್ಯಯನದ ಸೀಮಿತದಲ್ಲಿ ನೀಡಲಾಗಿದೆ.

ಆಧುನಿಕ ಸಮೂಹ ಮಾಧ್ಯಮಗಳಾದ ರೇಡಿಯೋ, ಸಿನಿಮಾ, ದೂರದರ್ಶನ, ಮೊಬೈಲ್, ಗಣಕಯಂತ್ರ ಮತ್ತು ಉದಾರೀಕರಣ, ಜಾಗತೀಕರಣ, ಕೈಗಾರಿಕರಣ, ನಗರೀಕರಣ ಮೊದಲಾದವುಗಳ ಪ್ರಭಾವದಿಂದ ಪರಂಪರಾಗತವಾಗಿ ರೂಡಿಸಿಕೊಂಡು, ಉಳಿಸಿ–ಬೆಳಸಿಕೊಂಡು ಬಂದಿರುವ ಜೀವನ ಮೌಲ್ಯಗಳು ಅಳಿವಿನಂಚಿನಲ್ಲಿದ್ದು, ಇವರು ಅನ್ಯವೃತ್ತಿಗಳನ್ನು ಅವಲಂಬಿಸಿ ಜೀವಿಸುವರು. ಇದರಿಂದ ನಮ್ಮ ಸಾಂಸ್ಕೃತಿಕ ಸಂಪತ್ತಿನ ಮತ್ತು ಮೌಖಿಕ ಪರಂಪರೆಯ ತಾಯಿಬೇರುಗಳಾದ ಇವರ ಅಭಿವೃದ್ಧಿಗೆ ಪೋಷಣಗೆ ಸರ್ಕಾರದ ವಿವಿಧ ಸಂಘಸಂಸ್ಥೆಗಳಿದ್ದರೂ ಅವುಗಳ ಪ್ರಯತ್ನ, ಶ್ರಮ ಸಾಲದು.

ನಮ್ಮನಾಡಿನ ಸಾಂಸ್ಕೃತಿಕ ಕೇಂದ್ರಗಳಂತಿರುವ ವೃತ್ತಿ–ಅರೆವೃತ್ತಿಗಾಯಕರನ್ನು ಉಳಿಸಿ ಬೆಳಸಬೇಕಾದರೆ, ಇಂದಿನ ಪರಿವರ್ತನೆಗೆ ತಕ್ಕಂತೆ ಅವರ ಕಲಾಮಾಧ್ಯಮಗಳ ಬದಲಾವಣೆ, ಪುನಶ್ಚೇತನ ಕಾರ್ಯಗಾರ, ಹಾಡುಗಾರಿಕೆ, ವೇಷಭೂಷಣಗಳಲ್ಲಿ, ಬದಲಾವಣೆ ರೂಪಿಸಿಕೊಂಡು ಸಮೂಹ ಮಾಧ್ಯಮಗಳಲ್ಲಿ ಅವರ ಕಥಾ, ಕಲೆ ಪ್ರದರ್ಶನಗಳನ್ನು ಬಿತ್ತರಿಸುವುದರ ಮೂಲಕ ಕಣ್ಮರೆಯಾಗುತ್ತಿರುವ ಪರಂಪರಾಗತ ಮೌಖಿಕ ಪರಂಪರೆಯನ್ನು ತುರ್ತಾಗಿ ರಕ್ಷಿಸಿ ಪೋಷಿಸುವ ಹೊಣೆಗಾರಿಗೆ ಸರ್ಕಾರ ಮತ್ತು ನಮ್ಮದಾಗಿದೆ.

**ಅಧ್ಯಯನದ ಫಲಿತಗಳು :**

ನಾಯಕನಹಟ್ಟಿ ಪರಿಸರದ ವ್ಯಾಪ್ತಿಯಲ್ಲಿ ಹಾಡುಗಾರಿಕೆಯನ್ನು ತಮ್ಮ ಕುಲಮೂಲವೃತ್ತಿಯನ್ನಾಗಿ ಮಾಡಿಕೊಂಡು ಜೀವಿಸುವ ವೃತ್ತಿಗಾಯಕರಾದ ಕಿನ್ನರಿಜೋಗಿಗಳು, ಚೌಡಿಕೆಯವರು, ದೊಂಬಿದಾಸರು, ಸುಡುಗಾಡುಸಿದ್ಧರು, ಮತ್ತು ತಮ್ಮ ಮೂಲ ವೃತ್ತಿಯ ಜೊತೆಗೆ ಮೌಖಿಕ ಪರಂಪರೆಯ ಕಲೆಯಲ್ಲಿ ವಿಶೇಷ ಪರಿಣಿತಿ ಪಡೆದ, ತಮ್ಮ ವಿದ್ವತ್ ಪ್ರೌಢಿಮೆಯನ್ನು ಸಮಾಜದ ಸೇವೆಗಾಗಿ ಬಳಸುವ, ಹಾಡುಗಾರಿಕೆಯನ್ನು ಉಪವೃತ್ತಿಯಾಗಿಸಿಕೊಂಡು ಜೀವಿಸುವ ಅರೆವೃತ್ತಿಗಾಯಕರಾದ ಕೋಲಾಟದವರು, ಭಜನೆಮೇಳದವರು, ಬಯಲಾಟಮೇಳದವರು, ಸೋಬಾನೆಯವರು ಇಲ್ಲಿ ನೆಲನಿಂತಿದ್ದು, ಅವರು ಸಾಂಸ್ಕೃತಿಕ ಪ್ರಚಾರಕರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ. ಇವರನ್ನು ಈ ನಿಬಂಧದಲ್ಲಿ ಅಧ್ಯಯನಕ್ಕೆ ಒಳಪಡಿಸಿ ಈ ಕೆಳಕಂಡ ಫಲಿತಗಳನ್ನು ಗುರುತಿಸಿದೆ.

* ನಾಯಕನಹಟ್ಟಿ ಪರಿಸರವು ಮೌಖಿಕ ಪರಂಪರೆಯ ಮಾಹಿತಿ ಕಣಜ ಎಂಬುದನ್ನು ಈ ಅಧ್ಯಯನದ ಹಿನ್ನಲೆಯಲ್ಲಿ ನೋಡಲಾಗಿದೆ.
* ಈ ಪರಿಸರವು ನಮ್ಮ ರಾಜ್ಯದ ಪ್ರಮುಖ ಧಾರ್ಮಿಕ, ಚಾರಿತ್ರಿಕ ಬುಡಕಟ್ಟು ಸಂಸ್ಕೃತಿಯ ನೆಲೆ.
* ವೃತ್ತಿಗಾಯಕರಾದ ಚೌಡಿಕೆಯವರು, ಕಿನ್ನರಿಜೋಗಿಗಳು, ದೊಂಬಿದಾಸರು, ಸುಡುಗಾಡುಸಿದ್ದರು. ಮೊದಲಾದವರು ತಮ್ಮ ವೃತ್ತಿಮೂಲದ ಬಗ್ಗೆ ಪೌರಾಣಿಕ, ಜನಪದ, ಐತಿಹ್ಯಗಳನ್ನು ಅವಲಂಬಿಸಿರುವರು.
* ವೃತ್ತಿಗಾಯಕರು ಧಾರ್ಮಿಕ, ಸಾಮಾಜಿಕ, ಸಂಪ್ರದಾಯಗಳು, ನಂಬಿಕೆಗಳು, ಆಚರಣೆಗಳಲ್ಲಿ ತಮ್ಮದೆ ಆದ ಭಿನ್ನತೆ, ವೈಶಿಷ್ಟ್ಯತೆಯನ್ನು ಹೊಂದಿರುವರು.
* ಇವರ ಹಾಡುಗಾರಿಕೆಯಲ್ಲಿ ಮೌಖಿಕ ಸಾಹಿತ್ಯದ ಪ್ರಕಾರಗಳಾದ ಕಾವ್ಯ, ಕಥೆ, ಲಾವಣಿ, ಸೋಬಾನೆ, ಗಾದೆ, ಒಗಟು, ಶಿಶುಪ್ರಾಸ, ರಾಮಾಯಣ, ಮಹಾಭಾರತ, ಪುರಾಣಗಳ ಕುರಿತ ವಿಷಯವಸ್ತು ಒಳಗೊಂಡಿದೆ.
* ಇವರು ಆರಂಭಿಸುವ ಕುಲದೈವಗಳು, ಸ್ಥಳೀಯದೈವಗಳು ಮತ್ತು ಇಲ್ಲಿನ ಸಾಂಸ್ಕೃತಿಕ ನಾಯಕರ ಚರಿತ್ರೆಯನ್ನು ತಮ್ಮ ಹಾಡುಗಾರಿಕೆಯಲ್ಲಿ ಕಟ್ಟಿಕೊಡುತ್ತಾರೆ.
* ಇವರ ಭಾಷಾವೈವಿಧ್ಯತೆಯನ್ನು ಕಾಣಬಹುದು. ಇಲ್ಲಿನ ಬಹುತೇಕ ವೃತ್ತಿ ಗಾಯಕರ ಮಾತೃಭಾಷೆ ತೆಲುಗು, ಮರಾಠಿಯಾದರೂ, ಇವರು ಕನ್ನಡದಲ್ಲಿಯೇ ವ್ಯವಹರಿಸುವುದು, ಓದುವುದು ಹಾಡುವುದನ್ನು ಕಾಣಬಹುದು.

* ಪಾರಂಪರಿಕ ಕಲೆಗಳಾದ ಬಯಲಾಟ, ಕೋಲಾಟ, ದಾಸರಾಟ, ಹಾಗೂ ಭಜನೆ, ಸೋಬಾನೆ ಮತ್ತು ಕಥಾಮೇಳಗಳ ಮೂಲಕ ಜನಪದರಿಗೆ ಮನರಂಜನೆ ನೀಡುವುದರ ಮೂಲಕ ಅವರಲ್ಲಿ ನೈತಿಕ, ಧಾರ್ಮಿಕ ಆದರ್ಶಗಳನ್ನು ಪ್ರಚಾರಮಾಡುವರು.

* ವೃತ್ತಿಗಾಯಕರ ಪ್ರಸ್ತುತ ಸಮಸ್ಯೆಗಳಾದ ಸಾಮಾಜಿಕ, ಆರ್ಥಿಕ ಅಸಮಾನತೆ ಮತ್ತು ರಾಜಕೀಯ, ಶೈಕ್ಷಣಿಕ ಸೌಲಭ್ಯಗಳನ್ನು ಪಡೆಯುವಲ್ಲಿ ಅವರು ಎದುರಿಸುವ ತೊಂದರೆಗಳನ್ನು ಗುರುತಿಸಿದೆ.

* ತಮ್ಮ ಮೂಲ ವೃತ್ತಿಗೆ ಆಧುನಿಕ ಸಮೂಹ ಮಾಧ್ಯಮಗಳು ಮತ್ತು ಜಾಗತೀಕರಣ, ಉದಾರೀಕರಣ, ಕೈಗಾರಿಕರಣಗಳ ಪ್ರಭಾವ, ಹಾವಳಿಯನ್ನು ನೋಡಬಹುದು.

* ತಮ್ಮ ಮೂಲ ವೃತ್ತಿಗೆ ಬದಲಾಗಿ ಪೂರಕ ವೃತ್ತಿಗಳ ಬಗ್ಗೆ ಹಾಗೇ ಪ್ರಸ್ತುತ ಸಮಾಜ, ಸರ್ಕಾರ, ಅವರಿಗೆ ಹೇಗೆ ನೆರವು ನೀಡುವುದರ ಮೂಲಕ ಸಹಕಾರಿಯಾಗಬಹುದೆಂಬುದರ ಬಗ್ಗೆ ಸಲಹೆ ಮತ್ತು ಪರ್ಯಾಯಗಳನ್ನು ನೋಡಬಹುದು.

## ಪರಾಮರ್ಶನ ಗ್ರಂಥಗಳು


೧. ಓಂಕಾರನಾಯ್ಕ ಎಚ್.,೨೦೦೭, ಚಂದ್ರಗುತ್ತಿ ಕ್ಷೇತ್ರದ ಸಾಂಸ್ಕೃತಿಕ ಸಂಕಥನ, ವಿಶ್ವಬಂಧು ಪ್ರಕಾಶನ, ಶಿವಮೊಗ್ಗ,

೨. ಕನ್ನಡ ವಿಶ್ವವಿದ್ಯಾಲಯ,೨೦೦೨; ಕರ್ನಾಟಕ ಜನಸಮುದಾಯ ರಾಜ್ಯಕೋಶ, ಸಂಪುಟ–೪, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ,

೩. ಕಾಳೆಗೌಡ ನಾಗವಾರ,೨೦೦೦, ಅಂಬಳಿಕೆ ಹಿರಿಯಣ್ಣ, ಜೀಶಂಪರವರ ಜಾನಪದ ಬರಗಳು, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ ಬೆಂಗಳೂರು,

೪. ಕುಪ್ಪೆನಾಗರಾಜ, ೨೦೦೮., ದೊಂಬಿದಾಸ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು,

೫. ಖಂಡೋಬಾ ಪಿ.ಕೆ.೧೯೯೩, ಸುಡುಗಾಡು ಸಿದ್ಧರ ಸಂಸ್ಕೃತಿ, ಕನ್ನಡ ಸಾಹಿತ್ಯ ಅಕಾಡೆಮಿ, ಬೆಂಗಳೂರು,

೬. ಗೀತಾನಾಗಭೂಷಣ,೧೯೯೩, ದುರುಗಮುರುಗಿಯರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ ಬೆಂಗಳೂರು,

೭. ಗೋಪಾಲ್ ಆರ್. (ಸಂ), ೨೦೦೫ ಚಿತ್ರದುರ್ಗ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ನಿರ್ದೇಶಕರು ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ ಹೊಸಪೇಟೆ,

೮. ಚಂದ್ರಪ್ಪ ಎನ್.,೨೦೦೨, ಎಲ್ಲಮ್ಮ ಒಂದು ಜಾನಪದೀಯ ಅಧ್ಯಯನ, ಮುಂಡ ಪ್ರಕಾಶನ, ವಿನಾಯಕ ನಗರ, ಬೆಂಗಳೂರು,

೯. ಚಂದ್ರಶೇಖರ ವಿ. ದಾವಣಗೇರಿ,೨೦೦೧, ಕಾಯಕಯೋಗಿ ಶ್ರೀಗುರುತಿಪ್ಪೇರುದ್ರಸ್ವಾಮಿ. ಶ್ರೀಗುರುತಿಪ್ಪೇರುದ್ರಸ್ವಾಮಿ ದೇವಸ್ಥಾನ ಸಮಿತಿ, ನಾಯಕನಹಟ್ಟಿ,

೧೦. ಚೆನ್ನಣ್ಣ ವಾಲೀಕಾರ,೨೦೦೨, ಜಾನಪದ ಲೋಕ, ಪ್ರಕಾಶಕರು ಕನಕ ಸಾಹಿತ್ಯ ಪ್ರತಿಷ್ಠಾನ ಬೆಂಗಳೂರು,

೧೧. ಚೇತನಕುಮಾರ ಆರ್.,೨೦೧೦, ಬಳ್ಳಾರಿ ಜಿಲ್ಲೆಯ ಜನಪದ ವೃತ್ತಿಗಾಯಕರು. ಶುಭೋದಯ ಪ್ರಕಾಶನ ಸಿರುಗುಪ್ಪ, ಬಳ್ಳಾರಿ.

೧೨. ದುರ್ಗಾದಾಸ ಕೆ.ಆರ್,೨೦೧೦, ಬಳ್ಳಾರಿ ಜಿಲ್ಲೆಯ ಬಯಲಾಟಗಳು, ಸಮತಾ ಪ್ರಕಾಶನ ಬೆಳಗಾವಿ

೧೩. ದೇ. ಜವರೇಗೌಡ.,೧೯೯೧ ಜಾನಪದ ಅಧ್ಯಯನ, ಚೆತನ ಬುಕ್‌ಹೌಸ್ ಮೈಸೂರು. ,

೧೪. ಪರಮಶಿವಯ್ಯ ಜೀ.ಶಂ.,೧೯೭೯, ದಕ್ಷಿಣ ಕರ್ನಾಟಕ ಜನಪದ ಕಾವ್ಯ ಪ್ರಕಾರಗಳು, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು,

೧೫. ಬೋರಲಿಂಗಯ್ಯ ಹಿ.ಚಿ., ೧೯೮೧, ದಾಸಪ್ಪ ಜೋಗಪ್ಪ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೧೬. ಭಾಸ್ಕರ್ ಟಿ.ಎಂ., ೨೦೦೦, ಸುಡುಗಾಡು ಸಿದ್ಧರು, ಮರುಗ ಪ್ರಕಾಶನ ಗುಲ್ಬರ್ಗಾ,

೧೭. ಮಂಜುನಾಥ ಬೇವಿನಕಟ್ಟಿ, ೧೯೯೪, ಜನಪದ ಸಂಸ್ಕೃತಿ, ತೇಜಸ್ವಿ ಪ್ರಕಾಶನ, ಹ್ಯಾರಡ, ಹೂವಿನಹಡಗಲಿ,

೧೮. ಮುತ್ತಯ್ಯ ಎಸ್.ಎಂ., ೨೦೦೭, ಜಾನಪದ ಸಂಕಥನ, ಅಕ್ಷಯ ಪ್ರಕಾಶನ ಚಿತ್ರದುರ್ಗ,

೧೯. ಯಳನಾಡು ಅಂಜನಪ್ಪ, ೧೯೯೩, ಹಗಲು ವೇಷದವರ ಸಂಸ್ಕೃತಿ, ಕನ್ನಡ ಸಾಹಿತ್ಯ ಅಕಾಡೆಮಿ, ಬೆಂಗಳೂರು

೨೦. ರಮೇಶ್ ಸ.ಚಿ. (ಸಂ) ೨೦೦೫, ಅಲೆಮಾರಿಗಳ ಸ್ಥಿತಿಗತಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೧. ರಾಜೆಂದ್ರ ಪಿ.ಕೆ., ೧೯೮೦, ದಕ್ಷಿಣ ಕರ್ನಾಟಕದ ಜನಪದ ರಂಗಭೂಮಿ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ,

೨೨. ವೀರಣ್ಣ ದಂಡೆ., ಶ್ರೀಪಾದಶೆಟ್ಟಿ (ಸಂ), ೨೦೦೬, ಸುವರ್ಣ ಜಾನಪದ ಲೇಖನಗಳು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಕರ್ನಾಟಕ ಸರ್ಕಾರ, ಬೆಂಗಳೂರು.

೨೩. ವಿರೇಶ ಶೇ. ಬಡಿಗೇರ, ೧೯೯೯, ಉತ್ತರ ಕರ್ನಾಟಕದ ಜಾನಪದ ಗೀತಮೇಳಗಳು, ವಿಮೋಚನಾ ಪ್ರಕಾಶನ, ಅಥಣಿ, ಬೆಳಗಾವಿ.

೨೪. ವೇದಮೂರ್ತಿ ಪಾಲಯ್ಯ., ೨೦೦೯, ಚಳ್ಳಕೆರೆ ತಾಲ್ಲೂಕು ಪರಿಸರದ ಸಾಂಸ್ಕೃತಿಕ ಅಧ್ಯಯನ, ಕನ್ನಡ ವಿಶ್ವವಿದ್ಯಾಲಯದ ಅಪ್ರಕಟಿತ ಎಂ.ಫಿಲ್. ನಿಬಂಧ,

೨೫. ವಿರುಪಾಕ್ಷಿ ಪೂಜಾರಹಳ್ಳಿ, ೨೦೦೨, ಚಿತ್ರದುರ್ಗ ಜಿಲ್ಲೆಯ ಬುಡಕಟ್ಟು ವೀರರು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೬. ಸಣ್ಣಪಾಪಯ್ಯ, ೨೦೦೯, ಚಿತ್ರದುರ್ಗ ಪರಿಸರದ ವ್ಯಕ್ತಿನಾಮಗಳು, ಬಂಡಾರ ಪ್ರಕಾಶನ ಮಸ್ಕಿ,

೨೭. ಸುಂಕಾಪುರ ಎಂ.ಎಸ್., (ಸಂ) ಜಾನಪದ ಸಾಹತ್ಯಿದರ್ಶನ ೪, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

# ಸಂದರ್ಶನ ಸೂಚಿ

| ಕ್ರಸಂ | ಕಲಾವಿದರ ಹೆಸರು | ವಯಸ್ಸು | ವಿಳಾಸ | ಜಾತಿ | ಸಂಪ್ರದಾಯ |
|---|---|---|---|---|---|
| ೦೧ | ತಿಪ್ಪೇಸ್ವಾಮಿ | ೫೦ | ಎನ್. ದೇವರಹಳ್ಳಿ(ಪೊ) ನಾಯಕನಹಟ್ಟಿ ಹೋಬಳಿ ಚಳ್ಳಕೆರೆ ತಾಲೂಕು | ಹಂಡೇ ಜೋಗಿ | ಕಿನ್ನರಿ ಮೇಳ |
| ೦೨ | ಸಿದ್ಧಪ್ಪ ಎಸ್. | ೩೮ | ಎನ್. ದೇವರಹಳ್ಳಿ (ಪೊ) ನಾಯಕನಹಟ್ಟಿ ಹೋಬಳಿ ಚಳ್ಳಕೆರೆ ತಾಲೂಕು | ಹಂಡೇ ಜೋಗಿ | ಮಾಹಿತಿ ಸಂಗ್ರಹಣೆಗಾಗಿ |
| ೦೩ | ಚೌಡಿಕೆ ಓಬಮ್ಮ | ೫೦ | ಬೋಸೆದೇವರಹಳ್ಳ ನಾಯಕನಹಟ್ಟಿ ಹೋಬಳಿ ಚಳ್ಳಕೆರೆ ತಾಲೂಕು | ಆದಿಕರ್ನಾಟಕ | ಚೌಡಿಕೆ ಮೇಳ |
| ೦೪ | ಬೋರಮ್ಮ | ೫೪ | ಬೋಸೆದೇವರಹಟ್ಟಿ ನಾಯಕನಹಟ್ಟಿ ಹೋಬಳಿ ಚಳ್ಳಕೆರೆ ತಾಲೂಕು | ಉಪ್ಪಾರ | ಚೌಡಿಕೆ ಮೇಳ |
| ೦೫ | ಮಂಜುನಾಥ | ೩೩ | ದೊಂಬಿದಾಸರ ಕಾಲೋನಿ ನಾಯಕನಹಟ್ಟಿ ಹೋಬಳಿ ಚಳ್ಳಕೆರೆ ತಾಲೂಕು | ದೊಂಬಿದಾಸ | ಮಾಹಿತಿ ಸಂಗ್ರಹಣೆಗಾಗಿ |
| ೦೬ | ಸಿದ್ಧರ ವೆಂಕಟೇಶಪ್ಪ | ೫೫ | ಆಂಜನೇಯ ಬಡಾವಣೆ ನಾಯಕನಹಟ್ಟಿ ಹೋಬಳಿ ಚಳ್ಳಕೆರೆ ತಾಲೂಕು | ಸುಡಗಾಡುಸಿದ್ಧರು | ಶಾಸ್ತ್ರ ಹೇಳುವುದು |
| ೦೮ | ಪೂಜಾರಿ ಓಬಯ್ಯ | ೩೩ | ರಾಮದುರ್ಗ, ಬೋಸೆದೇವರಹಟ್ಟಿ ನಾಯಕನಹಟ್ಟಿ ಹೋಬಳಿ ಚಳ್ಳಕೆರೆ ತಾಲೂಕು | ನಾಯಕ | ಕೋಲುಮೇಳ |
| ೦೯ | ನಿಂಗಾನಹಳ್ಳಿ ಬೋಸಯ್ಯ | ೬೦ | ಬೋಸೆದೇವರಹಟ್ಟಿ ನಾಯಕನಹಟ್ಟಿ ಹೋಬಳಿ ಚಳ್ಳಕೆರೆ ತಾಲೂಕು | ನಾಯಕ | ಕೋಲುಮೇಳ |
| ೧೦ | ಪೆನ್ನಪ್ಪ | ೬೫ | ರಾಮದುರ್ಗ, ನಾಯಕನಹಟ್ಟಿ ಹೋಬಳಿ ಚಳ್ಳಕೆರೆ ತಾಲೂಕು | ಆದಿಕರ್ನಾಟಕ | ಭಜನೆಮೇಳ |
| ೧೧ | ಸಣ್ಣ ಬೋರಯ್ಯ | ೫೫ | ನೆಲಗೇತನಹಟ್ಟಿ ನಾಯಕನಹಟ್ಟಿ ಹೋಬಳಿ ಚಳ್ಳಕೆರೆ ತಾಲೂಕು | ನಾಯಕ | ಭಜನೆಮೇಳ |
| ೧೨ | ಕ್ವಾನಗಲ ಬೋರಯ್ಯ | ೭೦ | ಮಲ್ಲೂರುಹಳ್ಳಿ ನಾಯಕನಹಟ್ಟಿ ಹೋಬಳಿ ಚಳ್ಳಕೆರೆ ತಾಲೂಕು | ನಾಯಕ | ಬಯಲಾಟ ಮೇಳಗಾರರು |
| ೧೩ | ಗೋವಿಂದಪ್ಪ | ೬೮ | ಜೋಗಿಹಟ್ಟಿ ನಾಯಕನಹಟ್ಟಿ ಹೋಬಳಿ ಚಳ್ಳಕೆರೆ ತಾಲೂಕು | ಗೊಲ್ಲರು | ಬಯಲಾಟ ಮೇಳಗಾರರು |
| ೧೪ | ಗಾದ್ರಿ ಬೋರಮ್ಮ ಮತ್ತು ಸಣ್ಣ ಬೋರಮ್ಮ | ೫೦ ೪೫ | ರಾಮದುರ್ಗ, ನಾಯಕನಹಟ್ಟಿ ಹೋಬಳಿ ಚಳ್ಳಕೆರೆ ತಾಲೂಕು | ನಾಯಕ | ಸೋಬಾನೆಯವರು |



ಸ್ಥಳೀಯ ದೇವತೆ ಕೊಲ್ಲಾರಮ್ಮನ ಉತ್ಸವ, ಬೋಸೇದೇವರ ಹಟ್ಟಿ



ಚೌಡಿಕೆಯವರ ಆರಾಧ್ಯ ದೇವತೆ ಉಚ್ಚಂಗಿ ಎಲ್ಲಮ್ಮ



ಕಿನ್ನರ ಜೋಗಿಗಳ ಕಥಾ ಮೇಳದ ಪ್ರದರ್ಶನ, ಎನ್. ದೇವರ ಹಳ್ಳಿ



ಕಿನ್ನರ ಜೋಗಿಗಳ ಅಲೆಮಾರಿ ಡೇರೆ, ಎನ್. ಗೌರೀಪುರ



ಕಿನ್ನರ ಜೋಗಿ ಕಲಾವಿದ ತಿಪ್ಪೇಸ್ವಾಮಿ ಕಿನ್ನರಿ ವಾದ್ಯದೊಂದಿಗೆ



ಕಿನ್ನರ ಜೋಗಿ ಕಲಾವಿದರು ಕಿನ್ನರಿ ವಾದ್ಯದೊಂದಿಗೆ ಎನ್. ದೇವರಹಳ್ಳಿ



ದೊಂಬಿದಾಸರ ವಾಸದ ಗುಡಿಸಲುಗಳು, ನಾಯಕನಹಟ್ಟಿ



ದೊಂಬಿದಾಸರ ಮಕ್ಕಳು, ನಾಯಕನಹಟ್ಟಿ



ಸುಡುಗಾಡು ಸಿದ್ದರ ಸಂದರ್ಶನ ಮಾಡುತ್ತಿರುವ ಸಂಶೋಧಕರು, ನಾಯಕನಹಟ್ಟಿ



ಸುಡುಗಾಡು ಸಿದ್ದರ ಡೇರೆಗಳು, ನಾಯಕನಹಟ್ಟಿ




ಸೋಬಾನೆ ಕಲಾವಿದರು, ನೆಲಗೇತನಹಟ್ಟಿ



ಸೋಬಾನೆ ಕಲಾವಿದರು, ರಾಮದುರ್ಗ

